KA / :G-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಆಗಸ್ಟ್ ೪, ೨೦೧೧ (ಶ್ರಾವಣ ೧೩, ಶಕ ವರ್ಷ ೧೯೩೩) | ಸಂಚಿಕೆ ೩೧ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕರ್ನಾಟಕ ಸರ್ಕಾರ**

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ನಂ. 720, ಶಿಂಷಾ ಭವನ, 46ನೇ ಅಡ್ಡರಸ್ತೆ, 8ನೇ ಬ್ಲಾಕ್, ಜಯನಗರ, ಬೆಂಗಳೂರು ಇವರ ನಡವಳಿಗಳು**

**ರದ್ದತಿ ಆದೇಶ**

**ಸಂಖ್ಯೆ: EST–2–235/2003–04, ದಿನಾಂಕ: 04–07–2011**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ (ಡಿ–ಗ್ರೂಪ್) ಜವಾನರ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಜವಾನರೆಂದು ಅಂತಿಮವಾಗಿ ಮುಖ್ಯಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಆಯ್ಕೆಯಾದ ಶ್ರೀ ಶಿವಣ್ಣ ಮಾರುತಿ ಗೂಗಿಕೊಳ್ಳ ಮುಕ್ಕಾಂ ಬೆಣಚಿನ ಮರಡಿ, ಗೋಕಾಕ್ ತಾಲ್ಲೂಕು ಇವರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯನ್ನು ಮತ್ತು ಅಂತಿಮ ಆಯ್ಕೆಯನ್ನು ಜವಾನರ ಬ್ಯಾಕ್‌ಲಾಗ್ ಮುಖ್ಯಪಟ್ಟಿಯಿಂದ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21–11–01 (ದಿನಾಂಕ: 22–11–2001 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ.)

2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 08 ಸೇನೆನಿ 2001 ದಿನಾಂಕ:13–02–2001

3) ಸರ್ಕಾರ ಅಧಿಸೂಚನೆ ಸಂಖ್ಯೆ: ಡಿಪಿಎಆರ್:13:ಎಸ್‌ಬಿಸಿ:2001 ದಿನಾಂಕ:01–06–2002 (ದಿನಾಂಕ: 14–06–2002 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ.)

4) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 97 ಸೇನೆನಿ 2002, ದಿನಾಂಕ:22–11–2002

5) ಸರ್ಕಾರದ ಅಧಿಸೂಚನೆ ಸಂಖ್ಯೆ: DPAR 74 SRR 2002, ದಿನಾಂಕ: 29–01–2003 (ದಿನಾಂಕ: 30–01–2003 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ.)

6) ಸರ್ಕಾರದ ಪತ್ರ ಸಂಖ್ಯೆ: ಕಂಇ 15 ಮುನೋಸ 2003, ದಿನಾಂಕ: 30–01–2004

7) ಈ ಕಛೇರಿಯ ಅಧಿಸೂಚನೆ ಸಂಖ್ಯೆ: EST-2-235/2003-04, ದಿನಾಂಕ: 04–05–2004 (ದಿನಾಂಕ: 06–05–2004 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)

8) ಈ ಕಛೇರಿಯ ಜವಾನರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಪಟ್ಟಿ ಸಂಖ್ಯೆ:EST-2-235/2003-04 ದಿನಾಂಕ: 16–09–2005

9) ಕ್ಷೇತ್ರ ಶಿಕ್ಷಣಾಧಿಕಾರಿಗಳು, ತಾಲ್ಲೂಕು ವಲಯ ಗೋಕಾಕ್ ಇವರ ಪತ್ರ ಸಂಖ್ಯೆ: ಇ5/ಅಂಪ/06–07/71 ದಿನಾಂಕ: 08–05–2007

10) ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ (ಬೆಳಗಾವಿ ಉತ್ತರ) ಇವರ ಪತ್ರ ಸಂಖ್ಯೆ: ಇ4/ಅಂ–ಪರಿಶೀಲನೆ/2007–08/2817 ದಿನಾಂಕ: 03–11–2007

11) ಈ ಕಛೇರಿಯ ಜವಾನರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಪಟ್ಟಿ ಸಂಖ್ಯೆ: EST-2-235/2003-04 ದಿನಾಂಕ: 21–07–2010

12) ಈ ಕಛೇರಿಯ ಜವಾನರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಪಟ್ಟಿ ಸಂಖ್ಯೆ: EST-2-235/2003-04 ದಿನಾಂಕ:28–08–2010

13) ಜಿಲ್ಲಾ ನೋಂದಣಾಧಿಕಾರಿಗಳು, ಮಡಿಕೇರಿ ಇವರಿಗೆ ಬರೆದಿರುವ ಈ ಕಛೇರಿಯ ಸಮಸಂಖ್ಯೆ ಪತ್ರ ದಿನಾಂಕ:21–09–2010

14) ಈ ಕಛೇರಿಯ ಅಲಾಟ್‌ಮೆಂಟ್ ಆರ್ಡರ್ ಸಂಖ್ಯೆ: EST-2-235/2003-04, ದಿನಾಂಕ: 21–09–2010

15) ಜಿಲ್ಲಾ ನೋಂದಣಾಧಿಕಾರಿಗಳು, ಮಡಿಕೇರಿ ಇವರು ಪೋಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ, ಬೆಳಗಾವಿ ಇವರಿಗೆ ಬರೆದ ಪತ್ರ ಸಂಖ್ಯೆ: ಜಿನೋಕ/ಕೊ/ಸಿಆರ್–111/2010–11 ದಿ: 01–10–2010, 24–12–2010 ಮತ್ತು 25–01–2011

16) ಪೋಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ, ಬೆಳಗಾವಿ ಇವರು ಜಿಲ್ಲಾ ನೋಂದಣಾಧಿಕಾರಿಗಳು. ಮಡಿಕೇರಿ ಇವರಿಗೆ ಬರೆದಿರುವ ಪತ್ರ ಸಂಖ್ಯೆ: ಡಿಎಸ್‌ಬಿ/ಬೆಳಗಾವಿ/ಎಸ್‌ಟಿಜಿ/657/10–11 ದಿನಾಂಕ: 27–01–2011 ಮತ್ತು ಸದರಿ ಪತ್ರಕ್ಕೆ ಲಗತ್ತಿಸಿ ಕಳುಹಿಸಿರುವ 23–06–1986 ಮತ್ತು 13–01–2011 ಎಂದು ದಿನಾಂಕಗಳನ್ನು ನಮೂದಿಸಿರುವ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಇವರ 1985–86ನೇ ಸಾಲಿನ ಏಳನೇ ತರಗತಿ ಅಂಕಪಟ್ಟಿ.

17) ಈ ಕಛೇರಿಯ ಸಮಸಂಖ್ಯೆ ಪತ್ರ ದಿನಾಂಕ: 31–03–2011

18) ಹಿರಿಯ ಸಹಶಿಕ್ಷಕರು, ಸರಕಾರಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ (ಪ್ರೌಢಶಾಲಾ ವಿಭಾಗ) ಉರುಬಿನ ಹಟ್ಟಿ – ಬೆಣಚಿನ ಮರಡಿ, ಗೋಕಾಕ್ ತಾಲ್ಲೂಕ್ ಇವರ ಪತ್ರ ಸಂಖ್ಯೆ: ಇಲ್ಲ, ದಿನಾಂಕ: 14–04–2011 ಮತ್ತು ಸದರಿ ಪತ್ರಕ್ಕೆ ಲಗತ್ತಿಸಿ ಕಳುಹಿಸಿರುವ ಸದರಿ ಮಹಾವಿದ್ಯಾಲಯದಲ್ಲಿ ದಿ:23–06–1986 ರಲ್ಲಿ ದಾಖಲಾಗಿರುವ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಇವರ 1985–86 ನೇ ಸಾಲಿನ ಏಳನೇ ತರಗತಿಯ ಮೂಲ ಅಂಕಪಟ್ಟಿ (ಸದರಿ ಮಹಾವಿದ್ಯಾಲಯದ ಹಿರಿಯ ಸಹ ಶಿಕ್ಷಕರಿಂದ attest ಆಗಿರುವುದು.)

**ಪ್ರಸ್ತಾವನೆ:–**

ಉಲ್ಲೇಖ (1)(2)(3)(4) ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ನಿಯಮಗಳ ಅಡಿಯಲ್ಲಿ ಕೆಳಕಂಡ ಮೀಸಲಾತಿ ವರ್ಗೀಕರಣದ ಪ್ರಕಾರ ಪರಿಶಿಷ್ಟ ಜಾತಿಯ ಹತ್ತೊಂಭತ್ತು (19) ಮತ್ತು ಪರಿಶಿಷ್ಟ ಪಂಗಡದ ಹದಿನೇಳು (17) ಈ ರೀತಿ ಒಟ್ಟು ಮೂವತ್ತಾರು (36) ಜವಾನರ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿಗಾಗಿ ಈ ಇಲಾಖೆಯಲ್ಲಿ ಗುರುತಿಸಿ ಸದರಿ ಹುದ್ದೆಗಳನ್ನು ಭರ್ತಿ ಮಾಡುವ ಸಲುವಾಗಿ ಉಲ್ಲೇಖ (6) ರ ಸರ್ಕಾರದ ಪತ್ರದಲ್ಲಿನ ನಿರ್ದೇಶನದಂತೆ ಮತ್ತು ಉಲ್ಲೇಖ (5) ರ ಅಧಿಸೂಚನೆ ಅನ್ವಯ ಅಭ್ಯರ್ಥಿಗಳು ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕೆಂಬ ಕನಿಷ್ಠ ವಿದ್ಯಾರ್ಹತೆಯನ್ನು ನಿಗಧಿಪಡಿಸಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (7) ರ ಈ ಕಛೇರಿಯ ಅಧಿಸೂಚನೆಯಲ್ಲಿ ಅರ್ಜಿಗಳನ್ನು ಕರೆಯಲಾಯಿತು.

| ಕ್ರಮ ಸಂಖ್ಯೆ | ಮೀಸಲಾತಿ ವರ್ಗೀಕರಣ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ |
|---|---|---|---|
| 1 | ಸಾಮಾನ್ಯ ಅರ್ಹತಾ ಅಭ್ಯರ್ಥಿ | 4 | 4 |
| 2 | ಮಹಿಳಾ ಅಭ್ಯರ್ಥಿ | 6 | 5 |
| 3 | ಗ್ರಾಮೀಣ ಅಭ್ಯರ್ಥಿ | 5 | 5 |
| 4 | ಮಾಜಿ ಸೈನಿಕ | 1 | 1 |
| 5 | ಕನ್ನಡ ಮಾಧ್ಯಮ ಅಭ್ಯರ್ಥಿ | 1 | 1 |
| 6 | ಯೋಜನಾ ನಿರಾಶ್ರಿತ ಅಭ್ಯರ್ಥಿ | 1 | 1 |
| 7 | ಅಂಗವಿಕಲ ಅಭ್ಯರ್ಥಿ | 1 | ಇಲ್ಲ |
| | **ಒಟ್ಟು** | **19** | **17** |

ಮೇಲ್ಕಂಡ ಉಲ್ಲೇಖ (7) ರ ಈ ಕಛೇರಿಯ ಅಧಿಸೂಚನೆಗೆ ಅನುಗುಣವಾಗಿ ಸಾವಿರಾರು ಅಭ್ಯರ್ಥಿಗಳು ಮೇಲ್ಕಂಡಂತೆ ಗುರ್ತಿಸಲ್ಪಟ್ಟ ಜವಾನರ ಬ್ಯಾಕ್‌ಲಾಗ್ ಹುದ್ದೆಯ ಆಯ್ಕೆಗಾಗಿ ನಿಗದಿತ ನಮೂನೆಯಲ್ಲಿ ಬ್ಯಾಕ್‌ಲಾಗ್ ಅರ್ಜಿಗಳನ್ನು ಸಲ್ಲಿಸಿದ್ದು, ಇದರ ಜೊತೆಗೆ ಶ್ರೀ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬ ಪರಿಶಿಷ್ಟ ಪಂಗಡದ ಅಭ್ಯರ್ಥಿಯು ಸಹ ಮೇಲ್ಕಂಡಂತೆ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಜವಾನರ ಬ್ಯಾಕ್‌ಲಾಗ್ ಹುದ್ದೆಯ ಆಯ್ಕೆಗಾಗಿ 29–06–2004 ರ ದಿನಾಂಕದ ನಿಗಧಿತ ಬ್ಯಾಕ್‌ಲಾಗ್ ಅರ್ಜಿಯನ್ನು ದಿನಾಂಕ 30–06–2004 ರಂದು ಸಲ್ಲಿಸಿ ಅದರ ಜೊತೆಗೆ ಕೆಳಕಂಡ ಶಾಲೆಯವರು ದಿನಾಂಕ: 04–10–1996 ರಂದು ನೀಡಿರುವ 1985–86 ನೇ ಸಾಲಿನ ಏಳನೇ ತರಗತಿ ಅಂಕಪಟ್ಟಿಯ ಜೆರಾಕ್ಸ್ ಪ್ರತಿಯನ್ನು ಲಗತ್ತಿಸಿ ಅರ್ಜಿ ಸಲ್ಲಿಸಿರುತ್ತಾರೆ.

ಬ್ಯಾಕ್‌ಲಾಗ್ ಅರ್ಜಿಗಳನ್ನು ಸ್ವೀಕರಿಸುವ ಕೊನೆ ದಿನಾಂಕವನ್ನು 03–07–2004 ಎಂದು ಗೊತ್ತುಪಡಿಸಿದ್ದು, ಸದರಿ ದಿನಾಂಕದ ನಂತರ ಹಲವಾರು ಜನರು ಈ ಕಛೇರಿಗೆ ಲಿಖಿತ ದೂರು ಸಲ್ಲಿಸಿ ಸದರಿ ದೂರು ಅರ್ಜಿಯಲ್ಲಿ ಹೇಗಾದರೂ ಮಾಡಿ ಈ ಜವಾನರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಹೊಂದಬೇಕೆಂಬ ದುರುದ್ದೇಶದಿಂದ ಹಲವಾರು ಅಭ್ಯರ್ಥಿಗಳು ಅವರ ಬ್ಯಾಕ್‌ಲಾಗ್ ಅರ್ಜಿಗಳ ಜೊತೆ ಏಳನೇ ತರಗತಿಯ ನಕಲಿ (ಖೊಟ್ಟಿ) ಅಂಕಪಟ್ಟಿಗಳನ್ನು ಸಲ್ಲಿಸಿರುವವರೆಂದು ಈ ಬಗ್ಗೆ ತನಿಖೆ ಮಾಡಿದಲ್ಲಿ ನಿಜಾಂಶ ತಿಳಿಯುವುದೆಂದು ದೂರು ಸಲ್ಲಿಸಿದ ಕಾರಣದಿಂದ ಈ ಬಗ್ಗೆ ನೈಜವಾದ ವರದಿ ಪಡೆಯುವ ಉದ್ದೇಶದಿಂದ ಹಾಗೂ ಸ್ವಾಭಾವಿಕ ನ್ಯಾಯ ದೃಷ್ಟಿಯಿಂದ ಮತ್ತು ನ್ಯಾಯಯುತವಾಗಿ 7ನೇ ತರಗತಿಯಲ್ಲಿ ತೇರ್ಗಡೆಯಾಗಿರುವ ಅರ್ಹ ಅಭ್ಯರ್ಥಿಗಳಿಗೆ ಯಾವ ರೀತಿಯಲ್ಲೂ ಅನ್ಯಾಯವಾಗಬಾರದೆಂಬ ಸದುದ್ದೇಶದಿಂದ ಜವಾನರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸುವ ಮುನ್ನ ಬ್ಯಾಕ್‌ಲಾಗ್ ಅರ್ಜಿ ಸಲ್ಲಿಸಿದ ಸಾವಿರಾರು ಅಭ್ಯರ್ಥಿಗಳ ಪೈಕಿ ಮೇಲ್ಕಂಡ ಮೀಸಲಾತಿಗೆ ಅನುಗುಣವಾಗಿ ಒಟ್ಟು 573 ಬ್ಯಾಕ್‌ಲಾಗ್ ಅಭ್ಯರ್ಥಿಗಳ 7ನೇ ತರಗತಿ ಅಂಕಪಟ್ಟಿಗಳನ್ನು ಅವುಗಳ ನೈಜತೆ ಬಗ್ಗೆ ಸತ್ಯಾಸತ್ಯತೆ ತಿಳಿಯುವ ಸಲುವಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಕಳುಹಿಸಿ ಈ ಬಗ್ಗೆ ಶಾಲಾ ದಾಖಲಾತಿಗಳನ್ನು ಸರಿಯಾಗಿ ಪರಿಶೀಲಿಸಿ ನೈಜವಾದ ವರದಿಯನ್ನು ಸಲ್ಲಿಸುವಂತೆ ಕೋರಲಾಯಿತು.

ಇದರ ಜೊತೆಗೆ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬುವರು ಈ ಇಲಾಖೆಯ ಜವಾನರ ಬ್ಯಾಕ್‌ಲಾಗ್ ಹುದ್ದೆಯ ಆಯ್ಕೆಗಾಗಿ 29–06–2004 ರ ದಿನಾಂಕದ ಅವರ ಬ್ಯಾಕ್‌ಲಾಗ್ ಅರ್ಜಿಯ ಜೊತೆ ಸಲ್ಲಿಸಲಾಗಿದ್ದ ಕೆಳಕಂಡ ಶಾಲೆಯವರು ದಿನಾಂಕ: 04–10–1996 ರಂದು ನೀಡಿದ 1985–86ನೇ ಸಾಲಿನ ಏಳನೇ ತರಗತಿ ಅಂಕಪಟ್ಟಿ ಪ್ರತಿಯಲ್ಲಿ ಸದರಿ ಅಭ್ಯರ್ಥಿಯು 600 ಅಂಕಗಳಿಗೆ 585 ಅಂಕ ಪಡೆದಿರುವರೆಂದು ನಮೂದಿಸಿದ್ದು, ಸದರಿ ಅಂಕಪಟ್ಟಿ ಪ್ರತಿಯನ್ನು ಸಹ ಇದರ ನೈಜತೆ ಬಗ್ಗೆ ಸತ್ಯಾಸತ್ಯತೆ ತಿಳಿಯುವ ಸಲುವಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಕಳುಹಿಸಿ ಈ ಬಗ್ಗೆ ನೈಜವಾದ ವರದಿ ಸಲ್ಲಿಸುವಂತೆ ಕೋರಲಾಯಿತು.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | 1985–86 ನೆ ಸಾಲಿನ ಏಳನೇ ತರಗತಿ ಅಂಕಪಟ್ಟಿಯನ್ನು ನೀಡಿದ ಶಾಲೆಯ ಹೆಸರು |
|---|---|---|
| 1 | ಶಿವಣ್ಣ ಮಾರುತಿ ಗೂಗಿಕೊಳ್ಳ<br>ಮು: ಬೆಣಚಿನ ಮರಡಿ<br>ಪೋಸ್ಟ್ : ಉರುಬಿನ ಹಟ್ಟಿ<br>ತಾಲ್ಲೂಕು: ಗೋಕಾಕ್<br>ಜಿಲ್ಲೆ: ಬೆಳಗಾವಿ–591122 | ಸರ್ಕಾರಿ ಹಿರಿಯ ಪ್ರಾಥಮಿಕ ಕನ್ನಡ ಗಂಡು ಮಕ್ಕಳ ಶಾಲೆ<br>ಬೆಣಚಿನ ಮರ್ಡಿ , (ಉರುಬಿನ ಹಟ್ಟಿ), ತಾ: ಗೋಕಾಕ್<br>ಜಿ: ಬೆಳಗಾವಿ<br>ಸದರಿ ಅಂಕಪಟ್ಟಿಯನ್ನು ದಿನಾಂಕ: 04–10–1996 ರಂದು ನೀಡಿದ್ದು, ಅದರಲ್ಲಿ ರ.ನಂ. 586 ಎಂದು ಹಾಗೂ ಜನ್ಮ ದಿನಾಂಕವನ್ನು 10–05–1973 ಎಂದು ನಮೂದಿಸಿದೆ. |

ಇದಕ್ಕೆ ಉತ್ತರವಾಗಿ BEO ಅಂದರೆ ಕ್ಷೇತ್ರ ಶಿಕ್ಷಣಾಧಿಕಾರಿಗಳು, ತಾಲ್ಲೂಕು ವಲಯ ಗೋಕಾಕ್ ಇವರು ಉಲ್ಲೇಖ (9) ರ ಅವರ ಪತ್ರದಲ್ಲಿ ಮತ್ತು ಉಪ–ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಚಿಕ್ಕೋಡಿ (ಬೆಳಗಾವಿ ಉತ್ತರ) ಇವರು ಉಲ್ಲೇಖ (10) ರ ಅವರ ಪತ್ರದಲ್ಲಿ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬುವರು ಅವರ ಬ್ಯಾಕ್‌ಲಾಗ್ ಅರ್ಜಿಯ ಜೊತೆ ಸಲ್ಲಿಸಿರುವ ಮೇಲ್ಕಂಡ ಶಾಲೆಯವರು ದಿನಾಂಕ: 04–10–1996 ರಂದು ನೀಡಿರುವ 1985–86 ನೇ ಸಾಲಿನ ಏಳನೇ ತರಗತಿ ಅಂಕಪಟ್ಟಿಯು ನೈಜತೆಯಿಂದ ಕೂಡಿದೆ ಎಂದು ಹಾಗೂ ಶಾಲಾ ಕ್ರೋಢೀಕೃತ ಅಂಕಪಟ್ಟಿಯಲ್ಲಿ ಯಾವುದೇ ಅಂಕಗಳನ್ನು ತಿದ್ದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಕ್ಷೇತ್ರ ಶಿಕ್ಷಣಾಧಿಕಾರಿಗಳು, ತಾಲ್ಲೂಕು ವಲಯ ಗೋಕಾಕ್ ಇವರು 08–05–2007 ರಂದು ದೃಢೀಕರಿಸಿ ಕಳುಹಿಸಿರುವ ಏಳನೇ ತರಗತಿ ಅಂಕಪಟ್ಟಿಯಲ್ಲಿ ಈ ಅಭ್ಯರ್ಥಿಯು 600 ಅಂಕಗಳಿಗೆ 585 ಅಂಕ ಪಡೆದಿರುವರೆಂದು ನಮೂದಿಸಿದೆ.

ಈ ರೀತಿ ಮೇಲ್ಕಂಡಂತೆ ವರದಿ ಬಂದ ಹಿನ್ನಲೆಯಲ್ಲಿ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬ ಅಭ್ಯರ್ಥಿಗೆ ಮೇಲ್ಕಂಡ ಶಾಲೆಯವರು ದಿನಾಂಕ: 04–10–1996 ರಂದು ನೀಡಿರುವ 1985–86ನೇ ಸಾಲಿನ ಏಳನೇ ತರಗತಿ ಅಂಕಪಟ್ಟಿಯು ನೈಜವಾಗಿದೆ ಎಂಬುದಾಗಿ ಪರಿಗಣಿಸಲಾಯಿತು. ತದನಂತರ ಈ ಇಲಾಖೆಯಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಜಾತಿಯ ಹತ್ತೊಂಭತ್ತು ಮತ್ತು ಪರಿಶಿಷ್ಟ ಪಂಗಡದ ಹದಿನೇಳು ಈ ರೀತಿ ಒಟ್ಟಾರೆ ಗುರ್ತಿಸಲ್ಪಟ್ಟ ಮೂವತ್ತಾರು ಜವಾನರ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಸತ್ಯಾಪನೆಗೆ ಒಳಪಡಿಸಲ್ಪಟ್ಟ ಅಂಕಪಟ್ಟಿಗಳಲ್ಲಿ ಅಂಕಪಟ್ಟಿಗಳು ನೈಜವಾಗಿದೆ ಎಂದು ವರದಿ ಬಂದಂತಹ ಅಭ್ಯರ್ಥಿಗಳ ಪೈಕಿ Merit ಆಧಾರದ ಮೇಲೆ ಮತ್ತು ಮೇಲ್ಕಂಡ ಮೀಸಲಾತಿ ಅನ್ವಯ ಉಲ್ಲೇಖ (3) ರ ನಿರ್ದೇಶನದನ್ವಯ 1:1 ರ ಪ್ರಮಾಣದಲ್ಲಿ ಮುಖ್ಯಪಟ್ಟಿ ಮತ್ತು ಹೆಚ್ಚುವರಿ ಪಟ್ಟಿಯಿಂದ ಒಟ್ಟಾರೆ 72 ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕಾಗಿದ್ದು ಅದರಂತೆ ಒಟ್ಟಾರೆ 72 ಬ್ಯಾಕ್‌ಲಾಗ್ ಅಭ್ಯರ್ಥಿಗಳನ್ನು ತಾತ್ಕಾಲಿಕವಾಗಿ ಜವಾನರೆಂದು ಆಯ್ಕೆ ಮಾಡಿದ್ದು, ಈ 72 ಬ್ಯಾಕ್‌ಲಾಗ್ ಅಭ್ಯರ್ಥಿಗಳಲ್ಲಿ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬುವವರನ್ನು ಸಹ ಸೇರಿಸಿ ಜವಾನರೆಂದು ತಾತ್ಕಾಲಿಕವಾಗಿ ಮುಖ್ಯಪಟ್ಟಿಯಲ್ಲಿ ಆಯ್ಕೆ ಮಾಡಲಾಯಿತು. ಹಾಗೂ ಸದರಿಯವರನ್ನೊಳಗೊಂಡ ಒಟ್ಟಾರೆ 72 ಬ್ಯಾಕ್‌ಲಾಗ್ ಅಭ್ಯರ್ಥಿಗಳಿರುವ ಪರಿಷ್ಕೃತ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯನ್ನು ಮತ್ತು ತಾತ್ಕಾಲಿಕ ಆಯ್ಕೆಯ ಹೆಚ್ಚುವರಿ ಪಟ್ಟಿಯನ್ನು ಉಲ್ಲೇಖ (11) ರನ್ವಯ ಪ್ರಕಟಿಸಿ ತದನಂತರ ಸದರಿ ಪರಿಷ್ಕೃತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಬ್ಯಾಕ್‌ಲಾಗ್ ನಿಯಮಗಳನ್ವಯ ಅಂತಿಮಗೊಳಿಸಿ ಒಟ್ಟಾರೆ ಮೂವತ್ತಾರು ಅಭ್ಯರ್ಥಿಗಳಿರುವ ಜವಾನರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಮುಖ್ಯಪಟ್ಟಿಯನ್ನು ಮತ್ತು ಮೂವತ್ತಾರು ಅಭ್ಯರ್ಥಿಗಳಿರುವ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯನ್ನು ಉಲ್ಲೇಖ (12) ರನ್ವಯ ಪ್ರಕಟಿಸಲಾಯಿತು.

ತದನಂತರ ಈ ರೀತಿ ಉಲ್ಲೇಖ (12) ರನ್ವಯ ಪ್ರಕಟಿಸಿರುವ ಜವಾನರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ Merit ನಲ್ಲಿ ಆಯ್ಕೆಯಾದ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬ ಈ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಕೊಡಗು ಜಿಲ್ಲೆಯಲ್ಲಿ ಗುರ್ತಿಸಲ್ಪಟ್ಟ ಜವಾನರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಜವಾನರೆಂದು ನೇಮಕ ಮಾಡಿಕೊಳ್ಳುವುದಕ್ಕಾಗಿ ಉಲ್ಲೇಖ (14) ರ

ಅಲಾಟ್‌ಮೆಂಟ್ ಆರ್ಡರ್‌ನಲ್ಲಿ ಕೊಡಗು ಜಿಲ್ಲೆಗೆ ಅಲಾಟ್ ಮಾಡಲಾಯಿತು ಹಾಗೂ ಕೆಳಕಂಡ ಅಭ್ಯರ್ಥಿಯ ಹೆಸರನ್ನೊಳಗೊಂಡ ದಿನಾಂಕ: 21–09–2010 ರ ಅಲಾಟ್‌ಮೆಂಟ್ ಆರ್ಡರ್ ಅನ್ನು ಸದರಿ ಅಭ್ಯರ್ಥಿಯ ನೇಮಕಾತಿಗಾಗಿ ಜಿಲ್ಲಾ ನೋಂದಣಾಧಿಕಾರಿಗಳು, ಮಡಿಕೇರಿ ಇವರಿಗೆ ಕಳುಹಿಸಲಾಯಿತು.

| ಕ್ರಮ ಸಂಖ್ಯೆ | ಬ್ಯಾಕ್‌ಲಾಗ್ ಅಭ್ಯರ್ಥಿ ಹೆಸರು | SC/ST | ವಿದ್ಯಾರ್ಹತೆ ಮತ್ತು ಶೇಕಡವಾರು ಅಂಕ | ಆಯ್ಕೆ ಮಾಡಿದ ಮೀಸಲಾತಿ ವರ್ಗೀಕರಣ |
|---|---|---|---|---|
| 1 | ಶಿವಣ್ಣ ಮಾರುತಿ ಗೂಗಿಕೊಳ್ಳ<br>ಮುಕ್ಕಾಂ: ಬೆಣಚಿನ ಮರಡಿ<br>ಪೋಸ್ಟ್ : ಉರುಬಿನ ಹಟ್ಟಿ<br>ತಾಲ್ಲೂಕು: ಗೋಕಾಕ್<br>ಜಿಲ್ಲೆ: ಬೆಳಗಾವಿ–591122 | ST | ಏಳನೇ ತರಗತಿ<br>ಶೇಕಡಾ 97.500 | ಪರಿಶಿಷ್ಟ ಪಂಗಡ<br>ಸಾಮಾನ್ಯ ಅರ್ಹತಾ ಅಭ್ಯರ್ಥಿ<br>ಮುಖ್ಯಪಟ್ಟಿ |

ಹಾಗೂ ಈ ರೀತಿ ನೇಮಕಾತಿಗಾಗಿ ಕೊಡಗು ಜಿಲ್ಲೆಗೆ ಅಲಾಟ್ ಮಾಡಿರುವ ಸದರಿ ಮೇಲ್ಕಂಡ ಅಭ್ಯರ್ಥಿಯನ್ನು ಕೊಡಗು ಜಿಲ್ಲೆಯಲ್ಲಿ ಗುರ್ತಿಸಲ್ಪಟ್ಟ ಜವಾನರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಮುನ್ನ ಸದರಿ ಅಭ್ಯರ್ಥಿಯು ತಾನು ವಾಸವಿರುವ ಬಗ್ಗೆ ನೀಡಿರುವ ವಿಳಾಸದ ವ್ಯಾಪ್ತಿಯಲ್ಲಿ ಬರುವ ಆ ಜಿಲ್ಲೆಯ Superintendent of Police ಇವರಿಗೆ ಪತ್ರ ಬರೆದು ಸದರಿ ಅಭ್ಯರ್ಥಿಯು ಸರ್ಕಾರಿ ಕೆಲಸಕ್ಕೆ ಅರ್ಹರೇ ಎಂಬ ಬಗ್ಗೆ ನೀಡುವ ಪೂರ್ವಾಚರಿತ್ರಾ ಪರಿಶೀಲನಾ ವರದಿಯನ್ನು ಸದರಿ ಪೋಲೀಸ್ ಅಧೀಕ್ಷಕರಿಂದ ತಪ್ಪದೇ ಪಡೆದುಕೊಂಡು ಸದರಿ ವರದಿಯಲ್ಲಿ ಈ ಅಭ್ಯರ್ಥಿಯ ನಡತೆ ಬಗ್ಗೆ ಯಾವುದೇ (Adverse Remark) ಪ್ರತಿಕೂಲ ವರದಿಗಳು ಇಲ್ಲವೆಂದು ಕಂಡುಬಂದಲ್ಲಿ ಮಾತ್ರ, ಆನಂತರವೇ ಮೇಲ್ಕಂಡ ಸದರಿ ಅಭ್ಯರ್ಥಿಗೆ ನೇಮಕಾತಿ ಆದೇಶವನ್ನು ನೀಡುವಂತೆ ಜಿಲ್ಲಾ ನೋಂದಣಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಉಲ್ಲೇಖ (13) ರನ್ವಯ ಈ ಕಛೇರಿಯಿಂದ ಪತ್ರ ಬರೆಯಲಾಯಿತು.

ಮೇಲ್ಕಂಡ ನಿರ್ದೇಶನಕ್ಕೆ ಅನುಗುಣವಾಗಿ ಜಿಲ್ಲಾ ನೋಂದಣಾಧಿಕಾರಿಗಳು, ಮಡಿಕೇರಿ ಇವರು ಉಲ್ಲೇಖ (14) ರ ಅಲಾಟ್‌ಮೆಂಟ್ ಆದೇಶದಂತೆ ಆಯ್ಕೆಯಾಗಿರುವ ಮೇಲ್ಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯು ಸರ್ಕಾರಿ ಕೆಲಸಕ್ಕೆ ಅರ್ಹರೇ? ಎಂಬ ಬಗ್ಗೆ ನೀಡುವ ಪೂರ್ವ ಚರಿತ್ರಾ ಪರಿಶೀಲನಾ ವರದಿಯನ್ನು ಕಳುಹಿಸುವಂತೆ ಜಿಲ್ಲಾ ಪೋಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ, ಬೆಳಗಾವಿ ಇವರಿಗೆ ಉಲ್ಲೇಖ (15) ರನ್ವಯ ಪತ್ರ ಬರೆದಿದ್ದರಿಂದ ಇದಕ್ಕೆ ಉತ್ತರವಾಗಿ ಸದರಿ ಬೆಳಗಾವಿ ಜಿಲ್ಲೆಯ ಜಿಲ್ಲಾ ಪೋಲೀಸ್ ಅಧೀಕ್ಷಕರವರು, ಮಡಿಕೇರಿ ಜಿಲ್ಲಾ ನೋಂದಣಾಧಿಕಾರಿಗಳಿಗೆ ಈ ಸಂಬಂಧ ಉಲ್ಲೇಖ (16) ರನ್ವಯ ದಿನಾಂಕ: 27–01–2011 ರಂದು ಬರೆದಿರುವ ಪತ್ರದಲ್ಲಿ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬ ಮೇಲ್ಕಂಡ ಈ ಬ್ಯಾಕ್‌ಲಾಗ್ ಅಭ್ಯರ್ಥಿಯ ಬಗ್ಗೆ ಸಂಬಂಧಪಟ್ಟ ಪೋಲೀಸ್ ಠಾಣೆಯಲ್ಲಿ ವಿಚಾರಣೆ ಮಾಡಲಾಗಿ ಸದರಿಯವರ ಏಳನೇ ವರ್ಗದ ಅಂಕಪಟ್ಟಿಯನ್ನು ತಪಾಸಣೆ ಮಾಡಿ ನೋಡಿದ್ದರಲ್ಲಿ ಮೂಲ ಅಂಕಪಟ್ಟಿಯಲ್ಲಿ 336 ಅಂಕಗಳನ್ನು ಪಡೆದುಕೊಂಡಿದ್ದು ಇರುತ್ತದೆಂದು ಆದರೆ ಬ್ಯಾಕ್‌ಲಾಗ್ ಅರ್ಜಿಯೊಂದಿಗೆ ಬಂದ ಏಳನೇ ವರ್ಗದ ಅಂಕಪಟ್ಟಿಯಲ್ಲಿ 585 ಅಂಕಗಳು ನಮೂದಾಗಿದ್ದು, ಅಂಕಪಟ್ಟಿಯಲ್ಲಿ ಬಾರಿ ವ್ಯತ್ಯಾಸ ಕಂಡುಬಂದಿರುತ್ತದೆಂದು ವರದಿ ಮಾಡುತ್ತಾ ಸದರಿಯವರ ಉದ್ಯೋಗದ ಅರ್ಜಿಯನ್ನು ಪರತ ಮಾಡಲಾಗಿದೆ ಎಂದು ಉಲ್ಲೇಖ (16) ರನ್ವಯ ವರದಿ ಮಾಡಿರುತ್ತಾರೆ.

ಇದಲ್ಲದೇ ಸದರಿ ಬೆಳಗಾವಿ ಜಿಲ್ಲೆಯ ಜಿಲ್ಲಾ ಪೋಲೀಸ್ ಅಧೀಕ್ಷಕರವರು ಮಡಿಕೇರಿ ಜಿಲ್ಲಾ ನೋಂದಣಾಧಿಕಾರಿಗಳಿಗೆ ಉಲ್ಲೇಖ (16) ರನ್ವಯ ದಿನಾಂಕ: 27–01–2011 ರಂದು ಬರೆದಿರುವ ಪತ್ರದ ಜೊತೆ ಮೇಲ್ಕಂಡ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬ ಇವರು ಎಂಟನೇ ತರಗತಿಗೆ ಸೇರುವಾಗ ಸರಕಾರಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ (ಪ್ರೌಢಶಾಲಾ ವಿಭಾಗ) ಉರುಬಿನ ಹಟ್ಟಿ–ಬೆಣಚಿನ ಮರಡಿ, ಗೋಕಾಕ್ ತಾಲ್ಲೂಕು ಇಲ್ಲಿ ದಿನಾಂಕ: 23–06–1986 ರಲ್ಲಿ ದಾಖಲಾಗಿರುವ ಸದರಿ ಅಭ್ಯರ್ಥಿಯ 1985–86ನೇ ಸಾಲಿನ ಏಳನೇ ತರಗತಿಯ ಅಂಕಪಟ್ಟಿ ಪ್ರತಿಯನ್ನು ಸಹ ಸದರಿ ಮಹಾವಿದ್ಯಾಲಯದ (ಪ್ರೌಢಶಾಲಾ ವಿಭಾಗದ) ಹಿರಿಯ ಸಹ–ಶಿಕ್ಷಕರಿಂದ ದಿನಾಂಕ: 13–01–2011 ರಂದು ಪಡೆದು ಅದನ್ನು ಉಲ್ಲೇಖ (16) ರ ಅವರ ಸದರಿ ಪತ್ರಕ್ಕೆ ಲಗತ್ತಿಸಿ ಜಿಲ್ಲಾ ನೋಂದಣಾಧಿಕಾರಿಗಳು, ಮಡಿಕೇರಿ ಇವರಿಗೆ ಕಳುಹಿಸಿರುತ್ತಾರೆ. ದಿನಾಂಕ: 23–06–1986 ಮತ್ತು ದಿನಾಂಕ: 13–01–2011 ಎಂಬ ಎರಡು ದಿನಾಂಕಗಳನ್ನು ನಮೂದಿಸಿರುವ ಸದರಿ ಮಹಾವಿದ್ಯಾಲಯದ ಹಿರಿಯ ಸಹ–ಶಿಕ್ಷಕರಿಂದ ರುಜು ಆಗಿರುವ ಸದರಿ ಅಂಕಪಟ್ಟಿಯಲ್ಲಿ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬ ಈ ಅಭ್ಯರ್ಥಿಯು 1985–86ನೇ ಸಾಲಿನ ಏಳನೇ ತರಗತಿಯಲ್ಲಿ 600 ಅಂಕಗಳಿಗೆ ಕೇವಲ 336 ಅಂಕಗಳನ್ನು ಪಡೆದಿರುವುದು ನಿಖರವಾಗಿ ಕಂಡುಬರುತ್ತದೆ.

ಈ ರೀತಿ ಮೇಲ್ಕಂಡಂತೆ ಬೆಳಗಾವಿ ಜಿಲ್ಲಾ ಪೋಲೀಸ್ ಅಧೀಕ್ಷಕರು ಇವರಿಂದ ವರದಿ ಬಂದ ಮೇಲೆ, ಈ ಪ್ರಕರಣದ ಬಗ್ಗೆ ನಿಖರವಾದ ಹಾಗೂ ನಿರ್ದಿಷ್ಟವಾದ ವಾಸ್ತವಾಂಶವನ್ನು ಹಾಗೂ ಸತ್ಯಾಸತ್ಯತೆಯನ್ನು ತಿಳಿಯಲೋಸುಗ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಇವರು ಎಂಟನೇ ತರಗತಿಗೆ ಸೇರುವಾಗ ಮೇಲ್ಕಂಡ ಸರಕಾರಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ, ಉರುಬಿನಹಟ್ಟಿ ಇಲ್ಲಿನ ಪ್ರೌಢ ಶಾಲಾ ವಿಭಾಗದಲ್ಲಿ ದಿನಾಂಕ: 23–06–1986 ರಲ್ಲಿ ದಾಖಲಾಗಿರುವ ಈ ಅಭ್ಯರ್ಥಿಯ ಏಳನೇ ತರಗತಿಯ ಮೂಲ ಅಂಕಪಟ್ಟಿಯನ್ನೇ ಅದು ಹೇಗಿದೆಯೋ ಹಾಗೆಯೇ ಅದನ್ನು ಜೆರಾಕ್ಸ್ ಮಾಡಿಸಿ attest ಮಾಡಿ ಕಳುಹಿಸುವಂತೆ ಸದರಿ ಪದವಿ ಪೂರ್ವ ಮಹಾವಿದ್ಯಾಲಯದ ಹಿರಿಯ ಸಹ–ಶಿಕ್ಷಕರಿಗೆ ಉಲ್ಲೇಖ (17) ರನ್ವಯ ದಿನಾಂಕ: 31–03–2011 ರಂದು ಈ ಕಛೇರಿಯಿಂದ ಪತ್ರ ಬರೆಯಲಾಯಿತು.

ಮೇಲಿನ ನಿರ್ದೇಶನಕ್ಕೆ ಉತ್ತರವಾಗಿ ಸದರಿ ಹಿರಿಯ ಸಹ–ಶಿಕ್ಷಕರು ಅವರ ಮಹಾವಿದ್ಯಾಲಯದಲ್ಲಿ ದಿನಾಂಕ:23–06–1986 ರಲ್ಲಿ ದಾಖಲಾಗಿದ್ದ 1985–86ನೇ ಸಾಲಿನ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬ ಈ ಅಭ್ಯರ್ಥಿಯ ಏಳನೇ ತರಗತಿಯ ಮೂಲ ಅಂಕ ಪಟ್ಟಿಯನ್ನೇ

ಅದು ಹೇಗಿದೆಯೋ ಹಾಗೆಯೇ ಜೆರಾಕ್ಸ್ ಮಾಡಿಸಿ, ಅದನ್ನು attest ಮಾಡಿ (ಸದರಿ ಮೂಲ ಅಂಕಪಟ್ಟಿಯಲ್ಲಿ ಬೆಣಚಿನ ಮರ್ಡಿ ಕನ್ನಡ ಗಂಡು ಮಕ್ಕಳ ಶಾಲೆಯಲ್ಲಿ ದಿನಾಂಕ: 23–06–1986 ರಲ್ಲಿ ಆಗ ಕೆಲಸ ಮಾಡುತ್ತಿದ್ದ ಆಗಿನ ಪ್ರಧಾನ ಗುರುಗಳ ಸಹಿ ಇರುತ್ತದೆ.) ಅದನ್ನು ಉಲ್ಲೇಖ (18) ರನ್ವಯ ದಿನಾಂಕ: 14–04–2011 ರ ಅವರ ಪತ್ರದ ಮೂಲಕ attest ಮಾಡಿ ಈ ಕಛೇರಿಗೆ ಕಳುಹಿಸಿರುತ್ತಾರೆ. ಇದರ ಜೊತೆಗೆ ಸದರಿ ಅಭ್ಯರ್ಥಿಯ ಮೂಲ T.C. ಯನ್ನು ಸಹ ಜೆರಾಕ್ಸ್ ಮಾಡಿಸಿ ಅದನ್ನು ಸಹ attest ಮಾಡಿ ಈ ಕಛೇರಿಗೆ ಕಳುಹಿಸಿರುತ್ತಾರೆ. ಸದರಿ ಅಭ್ಯರ್ಥಿಗೆ ಸೇರಿದ 1985–86 ನೇ ಸಾಲಿನ ಸದರಿ ಏಳನೇ ತರಗತಿಯ ಈ ಮೂಲ ಅಂಕಪಟ್ಟಿಯಲ್ಲಿ ಈ ಅಭ್ಯರ್ಥಿಯು ಏಳನೇ ತರಗತಿಯಲ್ಲಿ 600 ಅಂಕಗಳಿಗೆ 336 ಅಂಕ ಪಡೆದು ಶೇಕಡಾ 56 ರಷ್ಟು ಅಂಕ ಗಳಿಸಿರುವುದಾಗಿ ಸ್ಪಷ್ಟವಾಗಿ ನಮೂದಿಸಿದೆ.

ಈ ರೀತಿ, ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬ ಈ ಬ್ಯಾಕ್‌ಲಾಗ್ ಅಭ್ಯರ್ಥಿಯ 1985–86ನೇ ಸಾಲಿನ ಏಳನೇ ತರಗತಿ ಅಂಕ ಪಟ್ಟಿಯ ಬಗ್ಗೆ ಸತ್ಯಾಪನೆ ಮಾಡಿ ಮೇಲ್ಕಂಡವರುಗಳು ಅಂದರೆ

[i] ಬೆಳಗಾವಿ ಜಿಲ್ಲೆಯ ಜಿಲ್ಲಾ ಪೋಲೀಸ್ ಅಧೀಕ್ಷಕರು ದಿನಾಂಕ:27–01–2011 ರಂದು ಉಲ್ಲೇಖ (16) ರ ಅವರ ಪತ್ರದನ್ವಯ ಸಲ್ಲಿಸಿರುವ ವರದಿಯ ಪ್ರಕಾರ ಹಾಗೂ

[ii] ಸದರಿ ಪತ್ರಕ್ಕೆ ಸದರಿ ಪೋಲೀಸ್ ಅಧೀಕ್ಷಕರವರು ಲಗತ್ತಿಸಿರುವ ದಿನಾಂಕ:23–06–1986 ಮತ್ತು ದಿನಾಂಕ:13–01–2011 ಎಂಬ ಎರಡು ದಿನಾಂಕಗಳನ್ನು ನಮೂದಿಸಿರುವ ಬೆಣಚಿನ ಮರಡಿ ಸರಕಾರಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯದ (ಪ್ರೌಢಶಾಲಾ ವಿಭಾಗದ) ಹಿರಿಯ ಸಹ–ಶಿಕ್ಷಕರಿಂದ ರುಜು ಆಗಿರುವ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಇವರ 1985–86 ನೇ ಸಾಲಿನ ಏಳನೇ ತರಗತಿ ಅಂಕಪಟ್ಟಿಯ ಪ್ರಕಾರ ಮತ್ತು

[iii] ಹಿರಿಯ ಸಹ–ಶಿಕ್ಷಕರು, ಸರಕಾರಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ (ಪ್ರೌಢಶಾಲಾ ವಿಭಾಗದ) ಉರುಬಿನ ಹಟ್ಟಿ, ಬೆಣಚಿನ ಮರಡಿ, ಗೋಕಾಕ್ ತಾಲ್ಲೂಕು ಇವರು ದಿನಾಂಕ:14–04–2011 ರ ಅವರ ಉಲ್ಲೇಖ (18) ರ ಪತ್ರದ ಮೂಲಕ attest ಮಾಡಿ ಈ ಕಛೇರಿಗೆ ಕಳುಹಿಸಿರುವ ಸದರಿ ಮಹಾವಿದ್ಯಾಲಯದಲ್ಲಿ ದಿನಾಂಕ:23–06–1986 ರಲ್ಲಿ ದಾಖಲಾಗಿರುವಂತಹ 1985–86 ನೇ ಸಾಲಿನ ಮೂಲ ಏಳನೇ ತರಗತಿ ಅಂಕಪಟ್ಟಿಯ ಜೆರಾಕ್ಸ್ ಪ್ರತಿಯ ಪ್ರಕಾರ (ಸದರಿ ಅಂಕಪಟ್ಟಿಯಲ್ಲಿ ಬೆಣಚಿನ ಮರ್ಡಿ ಕನ್ನಡ ಗಂಡು ಮಕ್ಕಳ ಶಾಲೆಯಲ್ಲಿ ದಿನಾಂಕ: 23–06–1986 ರಲ್ಲಿ ಆಗ ಕೆಲಸ ಮಾಡುತ್ತಿದ್ದ ಆಗಿನ ಪ್ರಧಾನ ಗುರುಗಳ ಸಹಿ ಇರುತ್ತದೆ) ಇದರ ಪ್ರಕಾರ

[iv] ಹಾಗೂ ಇದಲ್ಲದೇ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬ ಈ ಅಭ್ಯರ್ಥಿಯು 29–06–2004 ರ ದಿನಾಂಕದ ಅವರ ಬ್ಯಾಕ್‌ಲಾಗ್ ಅರ್ಜಿಯ ಜೊತೆಯಲ್ಲಿ ಸಲ್ಲಿಸಿರುವ ದಿನಾಂಕ:04–10–1996 ರಂದು ಬೆಣಚಿನ ಮರ್ಡಿ ಸರ್ಕಾರಿ ಹಿರಿಯ ಪ್ರಾಥಮಿಕ ಕನ್ನಡ ಗಂಡು ಮಕ್ಕಳ ಶಾಲೆಯಿಂದ ನೀಡಿರುವ 1985–86 ನೇ ಸಾಲಿನ ಏಳನೇ ತರಗತಿ ಅಂಕಪಟ್ಟಿಯಲ್ಲಿರುವ ವಿಷಯವಾರು ಅಂಕಗಳಿಗೂ ಹಾಗೂ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯದ (ಪ್ರೌಢಶಾಲಾ ವಿಭಾಗದ) ಉರುಬಿನ ಹಟ್ಟಿ–ಬೆಣಚಿನ ಮರಡಿ, ಗೋಕಾಕ್ ತಾಲ್ಲೂಕು ಇಲ್ಲಿ ದಿನಾಂಕ: 23–06–1986 ರಲ್ಲಿ ದಾಖಲಾಗಿರುವ ಇದೇ ಅಭ್ಯರ್ಥಿಯ 1985–86 ನೇ ಸಾಲಿನ ಏಳನೇ ತರಗತಿ ಅಂಕಪಟ್ಟಿಯಲ್ಲಿರುವ ವಿಷಯವಾರು ಅಂಕಗಳಿಗೂ ಬಹಳಷ್ಟು ವ್ಯತ್ಯಾಸವಿದ್ದು, ಈ ಅಂಕಗಳು ಯಾವುದೇ ರೀತಿಯಲ್ಲೂ ಪರಸ್ಪರ ತಾಳೆಯಾಗುವುದಿಲ್ಲವೆಂಬುದು ಈ ಕೆಳಕಂಡ ಮಾಹಿತಿಯಿಂದ ನಿಖರವಾಗಿ ಹಾಗೂ ಸ್ಪಷ್ಟವಾಗಿ ಕಂಡುಬರುತ್ತದೆ.

| ಕ್ರ. ಸಂ. | ಶಿವಣ್ಣ ಮಾರುತಿ ಗೂಗಿಕೊಳ್ಳ ಇವರು ಕಲಿತ ವಿಷಯಗಳು | ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬ ಈ ಅಭ್ಯರ್ಥಿಯು 1985–86 ನೇ ಸಾಲಿನ ಏಳನೇ ತರಗತಿಯಲ್ಲಿ ಪಡೆದ ವಿಷಯವಾರು ಅಂಕಗಳ ವಿವರ | |
|---|---|---|---|
| | | ಸದರಿ ಅಭ್ಯರ್ಥಿಯು 29–06–2004 ರ ದಿನಾಂಕದ ಅವರ ಬ್ಯಾಕ್‌ಲಾಗ್ ಅರ್ಜಿಗೆ ಲಗತ್ತಿಸಿರುವ 04–10–1996 ರ ದಿನಾಂಕವಿರುವ ಏಳನೇ ತರಗತಿ ಅಂಕಪಟ್ಟಿಯಲ್ಲಿ ಇರುವಂತೆ ನಮೂದಿಸಿರುವ ಅಂಕಗಳು | ಉಲ್ಲೇಖ (16) ರ ಪತ್ರಕ್ಕೆ ಬೆಳಗಾವಿ ಜಿಲ್ಲಾ ಪೋಲೀಸ್ ಅಧೀಕ್ಷಕರು ಲಗತ್ತಿಸಿರುವ ಹಾಗೂ ಉಲ್ಲೇಖ (18) ರ ಪತ್ರಕ್ಕೆ ಉರುಬಿನ ಹಟ್ಟಿ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯದ (ಪ್ರೌಢಶಾಲಾ ವಿಭಾಗದ) ಹಿರಿಯ ಸಹ–ಶಿಕ್ಷಕರು ಲಗತ್ತಿಸಿರುವ 23–06–1986 ರ ದಿನಾಂಕವಿರುವ ಏಳನೇ ತರಗತಿ ಅಂಕಪಟ್ಟಿಯಲ್ಲಿರುವ ಅಂಕಗಳು |
| 1 | ಕನ್ನಡ I + II | 150 ಕ್ಕೆ 147 | 150 ಕ್ಕೆ 91 (62+29) |
| 2 | ಇಂಗ್ಲೀಷ್ | 100 ಕ್ಕೆ 96 | 100 ಕ್ಕೆ 65 |
| 3 | ಹಿಂದಿ | 50 ಕ್ಕೆ 49 | 50 ಕ್ಕೆ 28 |
| 4 | ಗಣಿತ | 100 ಕ್ಕೆ 97 | 100 ಕ್ಕೆ 43 |
| 5 | ಸಾ. ವಿಜ್ಞಾನ | 100 ಕ್ಕೆ 98 | 100 ಕ್ಕೆ 47 |
| 6 | ಸಮಾಜ ಪರಿಚಯ ಪಾಠ | 100 ಕ್ಕೆ 98 | 100 ಕ್ಕೆ 62 |
| | ಒಟ್ಟು | 600 ಕ್ಕೆ 585 (ಶೇಕಡಾ 97.50 ಅಂಕಗಳು) | 600 ಕ್ಕೆ 336 (ಶೇಕಡಾ 56 ಅಂಕಗಳು) |

ಮೇಲ್ಕಂಡ ವರದಿಗಳ ಹಾಗೂ ಮಾಹಿತಿಗಳ ಪ್ರಕಾರ ಶಿವಣ್ಣ ಮಾರುತಿ ಗೂಗಿಕೊಳ್ಳ ಇವರು 1985–86 ನೇ ಸಾಲಿನ ಏಳನೇ ತರಗತಿಯಲ್ಲಿ ಗರಿಷ್ಠ 600 ಅಂಕಗಳಿಗೆ 336 ಅಂಕಗಳಿಸಿ ಶೇಕಡಾ 56 ರಷ್ಟು ಅಂಕ ಪಡೆದಿರುವುದು ಖಚಿತವಾಗಿ ಕಂಡು ಬರುತ್ತದೆಯಲ್ಲದೇ ಸದರಿ ಅಭ್ಯರ್ಥಿಯು ಬ್ಯಾಕ್‌ಲಾಗ್ ಅರ್ಜಿಯ ಜೊತೆ ಸಲ್ಲಿಸಿರುವ ದಿನಾಂಕ: 04–10–1996 ರಂದು ನೀಡಿದ ಮೇಲ್ಕಂಡ ಶಾಲೆಯ 1985–86 ನೇ ಸಾಲಿನ ಏಳನೇ ತರಗತಿ ಅಂಕಪಟ್ಟಿಯ ಪ್ರಕಾರ ಸದರಿ ಅಭ್ಯರ್ಥಿಯು ಏಳನೇ ತರಗತಿಯಲ್ಲಿ ಗರಿಷ್ಠ 600 ಅಂಕಗಳಿಗೆ 585 ಅಂಕ ಪಡೆದಿಲ್ಲವೆಂಬುದು ಸಹ ನಿಖರವಾಗಿ ತಿಳಿದು ಬರುತ್ತದೆ.

ಈ ರೀತಿ ಸದರಿ ಅಭ್ಯರ್ಥಿಯು 1985–86 ನೇ ಸಾಲಿನ ಏಳನೇ ತರಗತಿಯಲ್ಲಿ ಶೇಕಡಾ 56 ರಷ್ಟು ಅಂಕಗಳಿಸಿದ್ದರೂ ಸಹ ಈ ಇಲಾಖೆಯ ಪರಿಶಿಷ್ಟ ಪಂಗಡದ ಜವಾನರ (ಡಿ–ಗ್ರೂಪ್) ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆ ಹೊಂದಿ ತದನಂತರ ಸದರಿ ಹುದ್ದೆಯಲ್ಲಿ ನೇಮಕಾತಿ ಹೊಂದಬೇಕೆಂಬ ದುರಾಲೋಚನೆಯಿಂದ ಉದ್ದೇಶಪೂರ್ವಕವಾಗಿ ಮೇಲ್ಕಂಡ ನೈಜ ಮಾಹಿತಿಯನ್ನು ಮರೆಮಾಚಿ, ಸದರಿ ಏಳನೇ ತರಗತಿಯಲ್ಲಿ ಗರಿಷ್ಠ 600 ಅಂಕಗಳಿಗೆ 585 ಅಂಕ ಪಡೆದಿರುವಂತಿರುವ ಅಂದರೆ ಶೇಕಡಾ 97.50 ರಷ್ಟು ಅಂಕಪಡೆದಿರುವಂತಿರುವ ಏಳನೇ ತರಗತಿಯ ನಕಲಿ (ಖೊಟ್ಟಿ) ಅಂಕಪಟ್ಟಿಯನ್ನು ಬ್ಯಾಕ್‌ಲಾಗ್ ನಿಗಧಿತ ಅರ್ಜಿಯ ಜೊತೆ ಸಲ್ಲಿಸಿರುವುದು ಹಾಗೂ ತಮ್ಮ ನೇಮಕಾತಿ ಸಂಬಂಧದಲ್ಲಿ ಈ ರೀತಿ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿ ದುರ್ನಡತೆ ಎಸಗಿರುವುದು ಕಂಡು ಬರುತ್ತದೆ. ಇದರಿಂದಾಗಿ ಸದರಿಯವರು ಅವರು ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲಾತಿಗೆ ಸ್ವತಃ ಅವರೇ ಕಾರಣರಾಗಿರುತ್ತಾರೆ ಎಂಬುದು ಸಹ ದೃಢಪಡುತ್ತದೆ.

ಮೇಲ್ಕಂಡ ಕಾರಣಗಳಿಂದ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಇವರು ತಮ್ಮ ನೇಮಕಾತಿ ಸಂಬಂಧ ಅವರ ನಿಗಧಿತ ಬ್ಯಾಕ್‌ಲಾಗ್ ಅರ್ಜಿಯ ಜೊತೆ ಲಗತ್ತಿಸಿರುವ ಮೇಲ್ಕಂಡ ಶಾಲೆಯ 1985–86 ನೇ ಸಾಲಿನ 04–10–1996 ರ ದಿನಾಂಕವಿರುವ ಏಳನೇ ತರಗತಿ ಅಂಕಪಟ್ಟಿಯು ನಕಲಿ (ಖೊಟ್ಟಿ) ಯಾಗಿದೆ ಎಂಬುದು ಖಚಿತವಾಗಿ ಹಾಗೂ ಅನುಮಾನಕ್ಕೆ ಆಸ್ಪದವಿಲ್ಲದಂತೆ ದೃಢಪಡುತ್ತದೆ ಹಾಗೂ ಸಾಬೀತಾಗುತ್ತದೆ.

ಇದರಿಂದಾಗಿ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬ ಈ ಬ್ಯಾಕ್‌ಲಾಗ್ ಅಭ್ಯರ್ಥಿಯು ಈ ಇಲಾಖೆಯ ಜವಾನರ ಬ್ಯಾಕ್‌ಲಾಗ್ ಹುದ್ದೆಯಲ್ಲಿನ ಆಯ್ಕೆಗಾಗಿ ಸುಳ್ಳು ಮಾಹಿತಿಯಿಂದ ಕೂಡಿದ ನಕಲಿ (ಬೋಗಸ್) ಅಂಕಪಟ್ಟಿಯನ್ನು ಕಾನೂನು ಬಾಹಿರವಾಗಿ ಸಲ್ಲಿಸಿರುವುದು ಮತ್ತು ಈ ಅಭ್ಯರ್ಥಿಯು 1977 ರ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ ನಿಯಮ 20 ಅನ್ನು ಉದ್ದೇಶಪೂರ್ವಕವಾಗಿ ಉಲ್ಲಂಘಿಸಿರುವುದು ನಿಸ್ಸಂದೇಹವಾಗಿ ಇಲ್ಲಿ ದೃಢಪಡುತ್ತದೆ.

ಇದಲ್ಲದೇ ಈ ಅಭ್ಯರ್ಥಿಯು ಬ್ಯಾಕ್‌ಲಾಗ್ ಅರ್ಜಿಯ ಜೊತೆ (04–10–1996 ರ ದಿನಾಂಕವಿರುವ) ಏಳನೇ ತರಗತಿಯ ಖೊಟ್ಟಿ (ಬೋಗಸ್) ಅಂಕಪಟ್ಟಿಯನ್ನು ಕಾನೂನು ಬಾಹಿರವಾಗಿ ಸಲ್ಲಿಸಿ ಈ ಇಲಾಖೆಯ ಜವಾನರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಅಕ್ರಮವಾಗಿ ಆಯ್ಕೆ ಹೊಂದಿರುವ ಆರೋಪವು ಸಹ ಇಲ್ಲಿ ನಿಸ್ಸಂದೇಹವಾಗಿ ಸಾಬೀತಾಗುತ್ತದೆ.

ಇದರಿಂದಾಗಿ ಈ ಅಭ್ಯರ್ಥಿಯು ಬ್ಯಾಕ್‌ಲಾಗ್ ಅರ್ಜಿಯ ಜೊತೆ ಸಲ್ಲಿಸಿರುವ 04–10–1996 ರ ದಿನಾಂಕವಿರುವ ಏಳನೇ ತರಗತಿ ಅಂಕಪಟ್ಟಿಯಲ್ಲಿ ಇವರು 600 ಅಂಕಗಳಿಗೆ 585 ಅಂಕ ಪಡೆದಿರುವರೆಂದು ನಮೂದಿಸಿರುವ ಈ ಅಂಕಗಳೆಲ್ಲವೂ ಈ ಅಭ್ಯರ್ಥಿಯು ಪಡೆದ ನೈಜ ಅಂಕಗಳಾಗಿರುವುದಿಲ್ಲ. ಇವೆಲ್ಲವೂ ಈ ಇಲಾಖೆಯ ಜವಾನರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆ ಹೊಂದಿ ತದನಂತರ ನೇಮಕಾತಿ ಹೊಂದುವ ಸಲುವಾಗಿಯೇ ಉದ್ದೇಶಪೂರ್ವಕವಾಗಿ ಕೃತಕವಾಗಿ ಸೃಜನೆ ಮಾಡಲ್ಪಟ್ಟ ಅಂಕಗಳೆಂಬುದಾಗಿ ನಿಸ್ಸಂದೇಹವಾಗಿ ದೃಢಪಡುತ್ತದೆ. ಈ ಕಾರಣದಿಂದಾಗಿ ಇವರು ಯಾವುದೇ ರೀತಿಯ ಆಯ್ಕೆಗೆ ಅರ್ಹರಿರುವುದಿಲ್ಲವೆಂದು ತೀರ್ಮಾನಿಸಿದೆ.

ಮೇಲ್ಕಂಡ ಕಾರಣಗಳಿಂದ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ ಎಂಬ ಈ ಅಭ್ಯರ್ಥಿಯು ಹೇಗಾದರೂ ಮಾಡಿ ಈ ಇಲಾಖೆಯ ಜವಾನರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆ ಹೊಂದಿ ತದನಂತರ ನೇಮಕಾತಿ ಹೊಂದಬೇಕೆಂಬ ದುರುದ್ದೇಶದಿಂದ ಕೂಡಿದವರಾಗಿ ಉದ್ದೇಶಪೂರ್ವಕವಾಗಿ ಈ ರೀತಿ ನಕಲಿ (ಬೋಗಸ್) ಅಂಕಪಟ್ಟಿ ಸಲ್ಲಿಸಿರುವುದರಿಂದ ಹಾಗೂ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಯಮ 20 ಅನ್ನು ಉಲ್ಲಂಘಿಸಿ ಶಿಕ್ಷಾರ್ಹ ಅಪರಾಧ ಎಸಗಿರುವುದರಿಂದ ಈ ಇಲಾಖೆಯ ಜವಾನರ ಬ್ಯಾಕ್‌ಲಾಗ್ ಹುದ್ದೆಯ ಮುಖ್ಯಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಜವಾನರೆಂದು ತಾತ್ಕಾಲಿಕವಾಗಿ ಆಯ್ಕೆಯಾದ ಈ ಅಭ್ಯರ್ಥಿಯ ಜವಾನರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯನ್ನು ಹಾಗೂ ಪರಿಷ್ಕೃತ ತಾತ್ಕಾಲಿಕ ಆಯ್ಕೆಯನ್ನು ಮತ್ತು ಅಂತಿಮ ಆಯ್ಕೆಯನ್ನು ಈ ಇಲಾಖೆಯ ಜವಾನರ ಬ್ಯಾಕ್‌ಲಾಗ್ ಮುಖ್ಯಪಟ್ಟಿಯಿಂದ ಶಾಶ್ವತವಾಗಿ ರದ್ದುಪಡಿಸುವುದು ಹಾಗೂ ಇವರ ನಿಗದಿತ ಬ್ಯಾಕ್‌ಲಾಗ್ ಅರ್ಜಿಯನ್ನು ತಿರಸ್ಕರಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: EST–2–235/2003–04, ದಿನಾಂಕ:04–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸದರಿ ಶಿವಣ್ಣ ಮಾರುತಿ ಗೂಗಿಕೊಳ್ಳ, ಬೆಣಚಿನ ಮರಡಿ, ಗೋಕಾಕ್ ತಾಲ್ಲೂಕು ಇವರು ಮೇಲ್ಕಂಡ ಶಾಲೆಯ ಅಂದರೆ ಬೆಣಚಿನ ಮರ್ಡಿ ಸರ್ಕಾರಿ ಹಿರಿಯ ಪ್ರಾಥಮಿಕ ಕನ್ನಡ ಗಂಡು ಮಕ್ಕಳ ಶಾಲೆಯ 1985–86 ನೇ ಸಾಲಿನ ಏಳನೇ ತರಗತಿಯಲ್ಲಿ ಗರಿಷ್ಠ 600 ಅಂಕಗಳಿಗೆ 336 ಅಂಕಗಳಿಸಿ ಶೇಕಡಾ 56 ರಷ್ಟು ಅಂಕ ಪಡೆದಿದ್ದರೂ ಸಹ ಈ ಇಲಾಖೆಯ ಪರಿಶಿಷ್ಟ ಪಂಗಡದ ಜವಾನರ (ಡಿ–ಗ್ರೂಪ್) ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆ ಹೊಂದಿ ತದನಂತರ ನೇಮಕಾತಿ ಹೊಂದಬೇಕೆಂಬ ದುರಾಲೋಚನೆಯಿಂದ ಉದ್ದೇಶಪೂರ್ವಕವಾಗಿ ಮೇಲ್ಕಂಡ ನೈಜ ಮಾಹಿತಿಯನ್ನು ಮರೆಮಾಚಿ ಸದರಿ ಏಳನೇ ತರಗತಿಯಲ್ಲಿ ಗರಿಷ್ಠ 600 ಅಂಕಗಳಿಗೆ 585 ಅಂಕ ಪಡೆದಿರುವಂತಿರುವ ಅಂದರೆ ಶೇಕಡಾ 97.5 ರಷ್ಟು ಅಂಕ ಪಡೆದಿರುವಂತಿರುವ ಏಳನೇ ತರಗತಿಯ ನಕಲಿ (ಖೊಟ್ಟಿ) ಅಂಕಪಟ್ಟಿಯನ್ನು ತಮ್ಮ ನೇಮಕಾತಿ ಸಂಬಂಧ ದಿನಾಂಕ: 30–06–2004 ರಂದು ಸಲ್ಲಿಸಿರುವ ಅವರ 29–06–2004 ರ ದಿನಾಂಕದ ನಿಗಧಿತ ಬ್ಯಾಕ್‌ಲಾಗ್ ಅರ್ಜಿ ಜೊತೆ ಸಲ್ಲಿಸಿ ದುರ್ನಡತೆ ಎಸಗಿ 1977 ರ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ ನಿಯಮ 20 ಅನ್ನು ಉದ್ದೇಶಪೂರ್ವಕವಾಗಿ ಉಲ್ಲಂಘಿಸಿ

ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲಾತಿಗೆ ಸ್ವತಃ ಅವರೇ ಕಾರಣರಾಗಿರುವುದರಿಂದ ಹಾಗೂ ಈ ರೀತಿ ಏಳನೇ ತರಗತಿಯ ನಕಲಿ (ಖೊಟ್ಟಿ) ಅಂಕಪಟ್ಟಿಯನ್ನು ಕಾನೂನು ಬಾಹಿರವಾಗಿ ಸಲ್ಲಿಸಿ ಈ ಇಲಾಖೆಯ ಪರಿಶಿಷ್ಟ ಪಂಗಡದ ಜವಾನರ (ಡಿ–ಗ್ರೂಪ್) ಬ್ಯಾಕ್‌ಲಾಗ್ ಹುದ್ದೆಯಲ್ಲಿ ಅಕ್ರಮವಾಗಿ ಆಯ್ಕೆ ಹೊಂದಿರುವ ಕಾರಣದಿಂದ ಹಾಗೂ ಇಂತಹವರನ್ನು ನೇಮಕ ಮಾಡಲು ಕಾನೂನಿನಲ್ಲಿ ಅವಕಾಶವಿರುವುದಿಲ್ಲವಾದ್ದರಿಂದ ಉಲ್ಲೇಖ (1) ರ SC/ST ಬ್ಯಾಕ್‌ಲಾಗ್ ವಿಶೇಷ ನೇಮಕಾತಿ ನಿಯಮಗಳನ್ನು ಓದಿಕೊಂಡಂತೆ, 1977 ರ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ 20ನೇ ನಿಯಮದ ಪ್ರಕಾರ ಪ್ರದತ್ತವಾದ ಅಧಿಕಾರದ ಮೇರೆಗೆ ಕೆಳಕಂಡಂತೆ ಆದೇಶಿಸಲಾಗಿದೆ.

(i) ಉಲ್ಲೇಖ (8) ರನ್ವಯ ದಿನಾಂಕ: 16–09–2005 ರಂದು ಪ್ರಕಟಿಸಿರುವ ಈ ಇಲಾಖೆಯ ಜವಾನರ (ಡಿ–ಗ್ರೂಪ್) ಬ್ಯಾಕ್‌ಲಾಗ್ ಹುದ್ದೆಯ ಪರಿಶಿಷ್ಟ ಪಂಗಡದ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಜವಾನರೆಂದು ತಾತ್ಕಾಲಿಕವಾಗಿ ಆಯ್ಕೆಯಾದ ಕೆಳಕಂಡ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಶ್ರೀ ಶಿವಣ್ಣ ಮಾರುತಿ ಗೂಗಿಕೊಳ್ಳ ಇವರ ಜವಾನರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯನ್ನು ಉಲ್ಲೇಖ (8) ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ಆಯ್ಕೆಯ ಪರಿಶಿಷ್ಟ ಪಂಗಡದ ಮುಖ್ಯಪಟ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಶಾಶ್ವತವಾಗಿ ರದ್ದುಪಡಿಸಿದೆ ಹಾಗೂ ಇವರ ಹೆಸರನ್ನು ಉಲ್ಲೇಖ (8) ರ ಬ್ಯಾಕ್‌ಲಾಗ್ ಆಯ್ಕೆಯ ಪರಿಶಿಷ್ಟ ಪಂಗಡದ ಮುಖ್ಯಪಟ್ಟಿಯಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ ಹಾಗೂ

(ii) ಇದರ ಜೊತೆಗೆ ಉಲ್ಲೇಖ (11) ರನ್ವಯ ದಿನಾಂಕ: 21–07–2010 ರಂದು ಪ್ರಕಟಿಸಿರುವ ಈ ಇಲಾಖೆಯ ಜವಾನರ (ಡಿ–ಗ್ರೂಪ್) ಬ್ಯಾಕ್‌ಲಾಗ್ ಹುದ್ದೆಯ ಪರಿಶಿಷ್ಟ ಪಂಗಡದ ಪರಿಷ್ಕೃತ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಜವಾನರೆಂದು ತಾತ್ಕಾಲಿಕವಾಗಿ ಆಯ್ಕೆಯಾದ ಕೆಳಕಂಡ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಶ್ರೀ ಶಿವಣ್ಣ ಮಾರುತಿ ಗೂಗಿಕೊಳ್ಳ ಇವರ ಜವಾನರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಯನ್ನು ಉಲ್ಲೇಖ (11) ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ಆಯ್ಕೆಯ ಪರಿಶಿಷ್ಟ ಪಂಗಡದ ಮುಖ್ಯಪಟ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಶಾಶ್ವತವಾಗಿ ರದ್ದುಪಡಿಸಿದೆ ಹಾಗೂ ಇವರ ಹೆಸರನ್ನು ಉಲ್ಲೇಖ (11) ರ ಬ್ಯಾಕ್‌ಲಾಗ್ ಆಯ್ಕೆಯ ಪರಿಶಿಷ್ಟ ಪಂಗಡದ ಮುಖ್ಯಪಟ್ಟಿಯಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ ಮತ್ತು

(iii) ಇದಲ್ಲದೇ, ಉಲ್ಲೇಖ (12) ರನ್ವಯ ದಿನಾಂಕ:28–08–2010 ರಂದು ಪ್ರಕಟಿಸಿರುವ ಈ ಇಲಾಖೆಯ ಜವಾನರ (ಡಿ–ಗ್ರೂಪ್) ಬ್ಯಾಕ್‌ಲಾಗ್ ಹುದ್ದೆಯ ಪರಿಶಿಷ್ಟ ಪಂಗಡದ ಅಂತಿಮ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಜವಾನರೆಂದು ಅಂತಿಮವಾಗಿ ಆಯ್ಕೆಯಾದ ಕೆಳಕಂಡ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಶ್ರೀ ಶಿವಣ್ಣ ಮಾರುತಿ ಗೂಗಿಕೊಳ್ಳ ಇವರ ಜವಾನರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯನ್ನು ಉಲ್ಲೇಖ (12) ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ಆಯ್ಕೆಯ ಪರಿಶಿಷ್ಟ ಪಂಗಡದ ಮುಖ್ಯಪಟ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಶಾಶ್ವತವಾಗಿ ರದ್ದುಪಡಿಸಿದೆ ಹಾಗೂ ಇವರ ಹೆಸರನ್ನು ಉಲ್ಲೇಖ (12) ರ ಬ್ಯಾಕ್‌ಲಾಗ್ ಆಯ್ಕೆಯ ಪರಿಶಿಷ್ಟ ಪಂಗಡದ ಮುಖ್ಯಪಟ್ಟಿಯಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ ಹಾಗೂ

(iv) ಇದಲ್ಲದೇ ಸದರಿ ಶ್ರೀ ಶಿವಣ್ಣ ಮಾರುತಿ ಗೂಗಿಕೊಳ್ಳ ಇವರು ಈ ಇಲಾಖೆಯ ಜವಾನರ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಹುದ್ದೆಯ ಆಯ್ಕೆಗಾಗಿ ದಿನಾಂಕ: 30–06–2004 ರಂದು ಈ ಕಛೇರಿಗೆ ಸಲ್ಲಿಸಿರುವ ಇವರ 29–06–2004 ರ ದಿನಾಂಕದ ನಿಗಧಿತ ಬ್ಯಾಕ್‌ಲಾಗ್ ಅರ್ಜಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಶಾಶ್ವತವಾಗಿ ತಿರಸ್ಕರಿಸಲಾಗಿದೆ ಮತ್ತು

(v) ಇದರ ಜೊತೆಗೆ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಶ್ರೀ ಶಿವಣ್ಣ ಮಾರುತಿ ಗೂಗಿಕೊಳ್ಳ ಇವರು ಈ ತಕ್ಷಣದಿಂದ ಈ ಇಲಾಖೆಯಲ್ಲಿನ (ಡಿ–ಗ್ರೂಪ್) ಜವಾನರ ಬ್ಯಾಕ್‌ಲಾಗ್ ಹುದ್ದೆಯ ಆಯ್ಕೆ ಹಕ್ಕನ್ನು ಮತ್ತು ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ಸದರಿಯವರು ಇನ್ನು ಮುಂದೆ ಈ ಇಲಾಖೆಯ (ಡಿ–ಗ್ರೂಪ್) ಜವಾನರ ಬ್ಯಾಕ್‌ಲಾಗ್ ಹುದ್ದೆಯ ಮೇಲೆ ಯಾವುದೇ ರೀತಿಯ ನೇಮಕಾತಿ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ (ಡಿ–ಗ್ರೂಪ್) ಜವಾನರ ಹುದ್ದೆಯ ಮೇಲೆ ಯಾವುದೇ ರೀತಿಯ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

| ಕ್ರ. ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 03–07–2004 ರ ಅಂತ್ಯಕ್ಕೆ ಅಭ್ಯರ್ಥಿಯ ವಯಸ್ಸು ವ–ತಿಂ–ದಿ | ವಿದ್ಯಾರ್ಹತೆ ಮತ್ತು ಶೇಕಡವಾರು ಅಂಕಗಳು | ಷರಾ |
|---|---|---|---|---|---|
| 1 | ಶಿವಣ್ಣ ಮಾರುತಿ ಗೂಗಿಕೊಳ್ಳ ಮುಕ್ಕಾಂ: ಬೆಣಚಿನ ಮರಡಿ ಪೋಸ್ಟ್: ಉರುಬಿನಹಟ್ಟಿ ತಾಲ್ಲೂಕ: ಗೋಕಾಕ್ ಜಿಲ್ಲೆ: ಬೆಳಗಾವಿ–591122 | 10.05.1973 | 31.01.23 | ಏಳನೇ ತರಗತಿ ಶೇಕಡಾ 56.000 ಅಂಕಗಳು | ಈ ಅಭ್ಯರ್ಥಿಯು 1977 ರ K.C.S (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ ನಿಯಮ 20 ಅನ್ನು ಉದ್ದೇಶಪೂರ್ವಕವಾಗಿ ಉಲ್ಲಂಘಿಸಿರುವುದರಿಂದ ಉಲ್ಲೇಖ (8) ರನ್ವಯ ಪ್ರಕಟಿಸಿರುವ ಈ ಇಲಾಖೆಯ ಜವಾನರ ಬ್ಯಾಕ್‌ಲಾಗ್ ಆಯ್ಕೆಯ ಪರಿಶಿಷ್ಟ ಪಂಗಡದ ಮುಖ್ಯಪಟ್ಟಿಯಿಂದ ಇವರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯನ್ನು ಹಾಗೂ ಉಲ್ಲೇಖ (11) ರನ್ವಯ ಪ್ರಕಟಿಸಿರುವ ಈ ಇಲಾಖೆಯ ಜವಾನರ ಬ್ಯಾಕ್‌ಲಾಗ್ ಆಯ್ಕೆಯ ಪರಿಶಿಷ್ಟ ಪಂಗಡದ |

| ಕ್ರ. ಸಂ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 03–07–2004 ರ ಅಂತ್ಯಕ್ಕೆ ಅಭ್ಯರ್ಥಿಯ ವಯಸ್ಸು ವ–ತಿಂ–ದಿ | ವಿದ್ಯಾರ್ಹತೆ ಮತ್ತು ಶೇಕಡವಾರು ಅಂಕಗಳು | ಷರಾ |
|---|---|---|---|---|---|
| | | | | | ಮುಖ್ಯಪಟ್ಟಿಯಿಂದ ಇವರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆಯನ್ನು ಮತ್ತು ಉಲ್ಲೇಖ (12) ರನ್ವಯ ಪ್ರಕಟಿಸಿರುವ ಈ ಇಲಾಖೆಯ ಜವಾನರ ಬ್ಯಾಕ್‌ಲಾಗ್ ಆಯ್ಕೆಯ ಪರಿಶಿಷ್ಟ ಪಂಗಡದ ಮುಖ್ಯಪಟ್ಟಿಯಿಂದ ಇವರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತ ಈ ಮೂಲಕ ಶಾಶ್ವತವಾಗಿ ರದ್ದುಪಡಿಸಿದೆ ಹಾಗೂ 29–06–2004 ರ ದಿನಾಂಕದ ಇವರ ನಿಗದಿತ ಬ್ಯಾಕ್‌ಲಾಗ್ ಅರ್ಜಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಶಾಶ್ವತವಾಗಿ ತಿರಸ್ಕರಿಸಿದೆ. |

**ಬಿ. ಶಿವಪ್ಪ**
ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ
ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು,
ಬೆಂಗಳೂರು.

ಪಿ.ಆರ್.261

## ಕರ್ನಾಟಕ ಲೋಕಸೇವಾ ಆಯೋಗ

### ತಿದ್ದುಪಡಿ

**ಸಂಖ್ಯೆ: ಇಪ(2)250/2011–12/ಪಿಎಸ್‌ಸಿ, ಬೆಂಗಳೂರು, ದಿನಾಂಕ:18.07.2011**

2010ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ದಿನಾಂಕ:26.08.2010ರ ರಾಜ್ಯಪತ್ರದಲ್ಲಿ ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)1899/2009–10/ಪಿಎಸ್‌ಸಿ, ದಿನಾಂಕ:06.08.2010ರಡಿ ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ ಅಭ್ಯರ್ಥಿಯು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನದಲ್ಲಿ ಗಳಿಸಿರುವ ವಿನಾಯಿತಿಯನ್ನು ಪರಿಗಣಿಸಿ ಫಲಿತಾಂಶ ಪ್ರಕಟಿಸುವಂತೆ ಅಭ್ಯರ್ಥಿಯಿಂದ ಬಂದ ಮನವಿಯನ್ನು ಪರಿಶೀಲಿಸಿ ಸದರಿ ಅಭ್ಯರ್ಥಿಯ ಫಲಿತಾಂಶವನ್ನು ಈ ತಿದ್ದುಪಡಿಯ ಮೂಲಕ ಸಂಬಂಧಿತರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಅಪೆಂಡಿಕ್ಸ್ "ಎ"**

**ಗುಲ್ಬರ್ಗಾ ಕೇಂದ್ರ**

**ಪಿ.ಡಬ್ಲ್ಯೂ.ಡಿ. ಹೈಯರ್ ಭಾಗ–1**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: 52593ನ್ನು ಸೇರಿಸಿ ಓದಿಕೊಳ್ಳುವುದು.

**ವಿ.ಬಿ. ಪಾಟೀಲ್**
ಕಾರ್ಯದರ್ಶಿ
ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.265

## ಪೊಲೀಸ್ ಇಲಾಖೆ

### ಪೊಲೀಸ್ ಆಯುಕ್ತರವರ ಕಾರ್ಯಾಲಯ, ಹುಬ್ಬಳ್ಳಿ–ಧಾರವಾಡ

**ನಮೂನೆ–1**

**9ನೇ ನಿಯಮ ನೋಡಿ**

**ಅಧಿಸೂಚನೆ**

ಶ್ರೀ ಸಿ.ಆರ್. ವಡ್ಡರ, ಸಿಪಿಸಿ–2177, ಧಾರವಾಡ ಶಹರ ಪೊಲೀಸ್ ಠಾಣೆಯಲ್ಲಿ ಕೆಲಸ ಮಾಡುತ್ತಿದ್ದು ಇವರ ಹೆಸರು ಸಿ.ಆರ್. ಬಳ್ಳಾರಿ ಎಂದು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಪೊಲೀಸ್ ಕಮೀಷನರ್,
ಹುಬ್ಬಳ್ಳಿ–ಧಾರವಾಡ,
ನೇಮಕಾಧಿಕಾರಿಯವರ ಸಹಿ ಮತ್ತು ಪದನಾಮ.

ಪಿಡಿ–84

**ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560 001**

**ಅಧಿಸೂಚನೆ**

**ಸಂಖ್ಯೆ: ಪಿಎಸ್‌ಸಿ 1 ಆರ್‌ಟಿಬಿ–2/2011, ದಿನಾಂಕ: 25–07–2011**

1. ಆಯೋಗವು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ರಡಿಯಲ್ಲಿ ಕೆಳಕಂಡ ತಾಂತ್ರಿಕ ಹುದ್ದೆಗಳನ್ನು ಭರ್ತಿ ಮಾಡಲು **ON-LINE ಮೂಲಕ** ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ:–

| ಕ್ರಮ ಸಂಖ್ಯೆ | ಇಲಾಖೆಯ ಹೆಸರು ಮತ್ತು ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| | **ಗ್ರೂಪ್ – ' ಎ ' ಹುದ್ದೆಗಳು** | |
| | **ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿನ ವಿವಿಧ ವಿಷಯಗಳ ತಜ್ಞರ 600 ಹುದ್ದೆಗಳು** | |
| 1 | ತಜ್ಞರು (ಜನರಲ್ ಮೆಡಿಸಿನ್) Specialists(General Medicine) | 149 ಹುದ್ದೆಗಳು |
| 2 | ತಜ್ಞರು (ಸಾಮಾನ್ಯ ಶಸ್ತ್ರ ಚಿಕಿತ್ಸಕರು) Specialists(General Surgeon) | 67 ಹುದ್ದೆಗಳು |
| 3 | ತಜ್ಞರು (ಪ್ರಸೂತಿ ಮತ್ತು ಸ್ತ್ರೀ ರೋಗ) Specialists(Gynecologist) | 107 ಹುದ್ದೆಗಳು |
| 4 | ತಜ್ಞರು (ಅರವಳಿಕೆ) Specialists(Anaesthesist) | 68 ಹುದ್ದೆಗಳು |
| 5 | ತಜ್ಞರು (ಮಕ್ಕಳ ತಜ್ಞರು) Specialists(Paediatrician) | 101 ಹುದ್ದೆಗಳು |
| 6 | ತಜ್ಞರು (ನೇತ್ರ) Specialists(Ophthalmologist) | 30 ಹುದ್ದೆಗಳು |
| 7 | ತಜ್ಞರು (ಕೀಲು, ಮೂಳೆ ರೋಗ) Specialists(Orthopedic Surgeon) | 25 ಹುದ್ದೆಗಳು |
| 8 | ತಜ್ಞರು (ಕಿವಿ, ಮೂಗು, ಗಂಟಲು) Specialists (ENT) | 25 ಹುದ್ದೆಗಳು |
| 9 | ತಜ್ಞರು (ಚರ್ಮರೋಗ) Specialists(Dermatologist) | 20 ಹುದ್ದೆಗಳು |
| 10 | ತಜ್ಞರು (ರೇಡಿಯಾಲಜಿಸ್ಟ್) Specialists(Radiologist) | **08 ಹುದ್ದೆಗಳು** |
| 11 | ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳ ಇಲಾಖೆಯಲ್ಲಿನ ವಿಮಾ ವೈದ್ಯಾಧಿಕಾರಿಗಳು. Insurance Medical Officer | **95 ಹುದ್ದೆಗಳು** |
| | **ಗ್ರೂಪ್ – ' ಬಿ ' ಹುದ್ದೆಗಳು** | |
| 12 | ಮೀನುಗಾರಿಕೆ ಇಲಾಖೆಯಲ್ಲಿನ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2) Assistant Director of Fisheries(Grade-II) | **30 ಹುದ್ದೆಗಳು** |

**ಟಿಪ್ಪಣಿ:** ಅನುಸೂಚಿಯಲ್ಲಿ ತಿಳಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

ಅಭ್ಯರ್ಥಿಗಳು ಒಂದು ಹುದ್ದೆಗೆ ಒಂದೇ ಅರ್ಜಿ ಸಲ್ಲಿಸತಕ್ಕದ್ದು, ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ, ಅಂತಹ ಅರ್ಜಿಗಳನ್ನು ಯಾವುದೇ ಮುನ್ಸೂಚನೆಯಿಲ್ಲದೇ ತಿರಸ್ಕರಿಸಲಾಗುವುದು.

ಅರ್ಜಿಗಳನ್ನು ಆನ್–ಲೈನ್ (ON-LINE) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು, ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.

1) ಅಭ್ಯರ್ಥಿಗಳು ಯಾವುದೇ ತಪ್ಪು ಮಾಹಿತಿಯನ್ನು ನೀಡದೇ ಅರ್ಜಿ ಭರ್ತಿ ಮಾಡಲು On-Line ನಲ್ಲಿ ನೀಡಿರುವ ಸೂಚನೆಗಳನ್ವಯ ಭರ್ತಿ ಮಾಡತಕ್ಕದ್ದು.

2) ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹವರ ವಿರುದ್ಧ ಆಯೋಗವು ಕಾನೂನಿನನ್ವಯ ಸೂಕ್ತ ಕ್ರಮ ಕೈಗೊಳ್ಳುವುದು.

**ವಿಶೇಷ ಸೂಚನೆ:–** ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಇಚ್ಚಿಸಿದ್ದಲ್ಲಿ, ಅಂತಹ ಅಭ್ಯರ್ಥಿಗಳು ಪ್ರತಿ ಹುದ್ದೆಗೆ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಿ ಶುಲ್ಕವನ್ನು ಪಾವತಿಸತಕ್ಕದ್ದು.

**2. ಶುಲ್ಕ:–**

| | |
|---|---|
| ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | **₹ 300/–** |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 ಮತ್ತು ಅಂಗವಿಕಲ ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ | **₹ 25/–** |

2.1 ನಿಗದಿತ ಶುಲ್ಕವನ್ನು ಸಿಂಡಿಕೇಟ್ ಬ್ಯಾಂಕಿನ ಯಾವುದೇ ಶಾಖೆಗಳಲ್ಲಿ ಚಲನ್ ನೀಡಿ ಹಣ ಪಾವತಿಸತಕ್ಕದ್ದು. ಈ ಸಂಬಂಧ ON-LINE ನಲ್ಲಿ ಅರ್ಜಿ ಸಲ್ಲಿಸಿ ಬ್ಯಾಂಕಿನ ಚಲನ್‌ಗಳನ್ನು ಡೌನ್‌ಲೋಡ್ ಮಾಡಿಕೊಂಡು ನಿಗದಿಪಡಿಸಿದ ಮೊಬಲಗನ್ನು ಸಂಬಂಧಿಸಿದ ಬ್ಯಾಂಕ್‌ಗೆ ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಪಾವತಿಸತಕ್ಕದ್ದು. ಇದನ್ನು ಹೊರತುಪಡಿಸಿ ಡಿ.ಡಿ., ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ.

3. ಅಭ್ಯರ್ಥಿಗಳು ONLINE ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು.

**ಹಂತ–1**

(1) ಅಭ್ಯರ್ಥಿಗಳು ಅಧಿಸೂಚನೆ ಹಾಗೂ ಸೂಚನೆಗಳನ್ನು ತಪ್ಪದೇ ಓದಿಕೊಂಡ ನಂತರ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು.

(2) ಆಯೋಗದ ವೆಬ್ ಸೈಟ್ "http://kpsc.kar.nic.in" ನ Home page ನಲ್ಲಿ On-line Application for Technical Post (ತಾಂತ್ರಿಕ ಹುದ್ದೆಗಳು) ಮೇಲೆ ಕ್ಲಿಕ್ ಮಾಡಿದ ನಂತರ Fresh Application ಮೇಲೆ ಕ್ಲಿಕ್ ಮಾಡುವುದು.

(3) ಅರ್ಜಿ ಸಲ್ಲಿಸಬೇಕಿರುವ ಹುದ್ದೆಗಳ ಗುಂಪನ್ನು ಆರಿಸಿಕೊಂಡ ನಂತರ Apply button ಅನ್ನು ಕ್ಲಿಕ್ ಮಾಡಿ,ಯಾವ ಹುದ್ದೆಗಾಗಿ ಅರ್ಜಿ ಸಲ್ಲಿಸುತ್ತಿರುವರೋ ಅದನ್ನು ಆರಿಸಿಕೊಂಡ ನಂತರ Apply button ಮೇಲೆ ಕ್ಲಿಕ್ ಮಾಡುವುದು.

(4) ಈಗ ಪರದೆಯ ಮೇಲೆ ಅರ್ಜಿಯ ನಮೂನೆಯು ಮೂಡುತ್ತದೆ. ಆಗ ಅಭ್ಯರ್ಥಿಯು ಎಲ್ಲಾ ವಿವರಗಳನ್ನು ಭರ್ತಿ ಮಾಡುವುದು. ಅರ್ಜಿಯಲ್ಲಿ ಭರ್ತಿ ಮಾಡಿದ ಎಲ್ಲಾ ವಿವರಗಳು ಪರದೆಯ ಮೇಲೆ ಮೂಡುತ್ತದೆ.

(5) ಅಭ್ಯರ್ಥಿಗಳು ಎಲ್ಲಾ ವಿವರಗಳನ್ನು ಭರ್ತಿ ಮಾಡಿದ ನಂತರ Preview button ಮೇಲೆ ಕ್ಲಿಕ್ ಮಾಡಿದ ನಂತರ Preview Page ಮೂಡುತ್ತದೆ.

(6) ಅಭ್ಯರ್ಥಿಗೆ Application ID ಮತ್ತು Password ಗಳನ್ನು ನೀಡಲಾಗುತ್ತದೆ. ಇವುಗಳನ್ನು ತಪ್ಪದೇ ಬರೆದಿಟ್ಟುಕೊಂಡಿರತಕ್ಕದ್ದು. ಇದರಿಂದ ಮುಂದಿನ ಹಂತದಲ್ಲಿ ID ಸಂಖ್ಯೆಯನ್ನು ನಮೂದಿಸುವುದರ ಮೂಲಕ Photo ಅನ್ನು Upload ಮಾಡತಕ್ಕದ್ದು.

(7) ಅಭ್ಯರ್ಥಿಗಳು ಭರ್ತಿ ಮಾಡಲಾದ ಎಲ್ಲಾ ವಿವರಗಳು ಪರದೆಯ ಮೇಲೆ ಮೂಡಿದ ನಂತರ ಮತ್ತೊಂದು ಸಲ ಕೂಲಂಕಷವಾಗಿ ಪರಿಶೀಲಿಸಿ, ಏನಾದರೂ ತಪ್ಪುಗಳಿದ್ದಲ್ಲಿ Edit button ಮೇಲೆ ಕ್ಲಿಕ್ ಮಾಡಿ ಅಗತ್ಯ ತಿದ್ದುಪಡಿಗಳನ್ನು ಮಾಡುವುದು.

(8) ಈ ಹಂತದಲ್ಲಿ ಶುಲ್ಕವನ್ನು ಪಾವತಿಸಬೇಕಿರುವ ಚಲನ್ ಮೂಡಿದಾಗ ಅಧಿಸೂಚನೆ / ಸೂಚನೆಗಳಲ್ಲಿ ತಿಳಿಸಿದಂತೆ ಸಿಂಡಿಕೇಟ್ ಬ್ಯಾಂಕಿನ ಯಾವುದೇ ಶಾಖೆಗಳಲ್ಲಿ ಶುಲ್ಕವನ್ನು ಪಾವತಿಸಿ, ಶುಲ್ಕದ ವಿವರಗಳನ್ನು ಚಲನ್‌ನಲ್ಲಿ ನಮೂದಿಸುವುದು.

(9) ಅಭ್ಯರ್ಥಿಗಳಿಗೆ ಚಲನ್‌ನ ಮುದ್ರಣವು ಕಾಣದೇ ಇದ್ದಲ್ಲಿ "Enter Journal Number" ಹಾಗೂ Applied Job ನ Upload Photo Button ಮೇಲೆ ಕ್ಲಿಕ್ ಮಾಡುವುದು. ಆಗ Application ID ಮತ್ತು Password ಅನ್ನು enter ಮಾಡಿದಾಗ ಚಲನ್ ಲಿಂಕ್ ಪ್ರಿಂಟ್ ಅನ್ನು ನೋಡಬಹುದಾಗಿದ್ದು, Print Challan Link ಅನ್ನು ಕ್ಲಿಕ್ ಮಾಡಿದಾಗ ಅದರ ಪ್ರಿಂಟ್ ಅನ್ನು ಅಭ್ಯರ್ಥಿಗಳು ತೆಗೆದುಕೊಳ್ಳಬಹುದು.

**NOTE:-** Before taking the challan print out, please check the details once again. If you want to change anything in your application, click on " EDIT ". After taking challan print out there is no provision to ' EDIT ' or ' RE-APPLY '.

**3.1 ಎರಡನೇ ಹಂತದಲ್ಲಿ ಈ ಕೆಳಕಂಡಂತೆ ಅಭ್ಯರ್ಥಿಗಳು ಸೂಚನೆಗಳನ್ನು ಪಾಲಿಸತಕ್ಕದ್ದು:–**

**ಹಂತ–2**

(1) ಈ ಮೊದಲೇ ಆರಿಸಿಕೊಂಡ ಹುದ್ದೆಗಳ ಗುಂಪನ್ನು ಆಯ್ಕೆ ಮಾಡಿಕೊಳ್ಳುವುದು.

(2) ಅಭ್ಯರ್ಥಿಗಳು ಅರ್ಜಿ ಸಲ್ಲಿಸಿರುವ ಹುದ್ದೆಗಳಿಗೆ ಸಂಬಂಧಿಸಿದಂತೆ Journal Entry Number ಹಾಗೂ Photo Upload Button ಗಳನ್ನು ಕ್ಲಿಕ್ ಮಾಡತಕ್ಕದ್ದು.

(3) ಈ ಹಂತದಲ್ಲಿ ನಿಮ್ಮ Application ID ಮತ್ತು Password ಅನ್ನು entry ಮಾಡಲು ಅರ್ಜಿಯಲ್ಲಿ ಕೇಳಲಾಗುತ್ತದೆ.

(4) ಈ ಮೇಲಿನ ವಿವರಗಳನ್ನು ನಮೂದಿಸಿದ ನಂತರ, ಬ್ಯಾಂಕಿನ Journal Number, ಶುಲ್ಕ ಪಾವತಿಸಿದ ಬ್ಯಾಂಕಿನ ಶಾಖೆಯ ವಿವರ ಮತ್ತು ಶುಲ್ಕ ಪಾವತಿಸಿದ ದಿನಾಂಕವನ್ನು ನಮೂದಿಸತಕ್ಕದ್ದು.

(5) ನಂತರ ಫೋಟೋ ಮತ್ತು ಪೂರ್ಣ ಸಹಿಯನ್ನು Upload ಮಾಡುವ ಪುಟವನ್ನು ನೋಡಬೇಕಿರುತ್ತದೆ.

(6) ಅಭ್ಯರ್ಥಿಗಳು ಫೋಟೋವನ್ನು Upload ಮಾಡಿ, ಅಂದರೆ ಅವರ ಇತ್ತೀಚಿನ ಪಾಸ್‌ಪೋರ್ಟ್ ಆಳತೆಯ ಭಾವ ಚಿತ್ರವನ್ನು ಒಂದು ಹಾಳೆಯ ಮೇಲೆ ಅಂಟಿಸಿ, ಅದರ ಕೆಳಗೆ ಕಪ್ಪು ಶಾಹಿಯ ಸ್ಕೆಚ್ ಪೆನ್ನಲ್ಲಿ ಪೂರ್ಣವಾಗಿ ಸಹಿ ಮಾಡಿ ಅದನ್ನು Scan ಮಾಡಿ ಅರ್ಜಿಗೆ Upload ಮಾಡತಕ್ಕದ್ದು. ನಂತರ ಭರ್ತಿ ಮಾಡಿರುವ ಪೂರ್ತಿ ಅರ್ಜಿಯನ್ನು ಪಡೆಯಲು Reprint Application Button ಅನ್ನು ಒತ್ತಿ ಅರ್ಜಿಯ ಪ್ರತಿ ಪಡೆಯಬಹುದು.

3.2 ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

* ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ: 28–07–2011.
* ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 27–08–2011 (ಸಂಜೆ 5:00 ಗಂಟೆಯವರೆಗೆ).
* ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ: 29–08–2011.
* ಶುಲ್ಕ ಪಾವತಿಸಲಾದ Journal Number ನಮೂದಿಸಲು ಕೊನೆಯ ದಿನಾಂಕ: 30–08–2011.

**ವಿಶೇಷ ಸೂಚನೆ:** On-line ಮೂಲಕ ಅರ್ಜಿಯನ್ನು ಭರ್ತಿ ಮಾಡುವ ಸಂದರ್ಭದಲ್ಲಿ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (Help line) 8453247103 ಮತ್ತು 8453248059 ಅನ್ನು ಬೆಳಿಗ್ಗೆ 8:00 ಗಂಟೆಯಿಂದ ರಾತ್ರಿ 8.00 ಗಂಟೆಯವರೆಗೆ ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

**4. ಅರ್ಹತಾ ಷರತ್ತುಗಳು:–**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಈ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ. ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**5 (1) ನೇಮಕಾತಿ ವಿಧಾನ:– ಸಂದರ್ಶನ ಮೂಲಕ ಆಯ್ಕೆ**

ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006 ರಲ್ಲಿ ನಿರ್ದಿಷ್ಟಪಡಿಸಲಾದಂತೆ, ಆಯೋಗದಿಂದ ಅಧಿಸೂಚಿಸಲಾಗಿರುವ ಯಾವುದೇ ತಾಂತ್ರಿಕ ಹುದ್ದೆಗಳ ಸಂದರ್ಶನಕ್ಕೆ ಅರ್ಹರಾಗಲು ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ.ಯ ಕನ್ನಡ ಪ್ರಥಮ ಭಾಷೆಯ ಮಟ್ಟದ 150 ಅಂಕಗಳಿಗೆ ಪರೀಕ್ಷೆ ನಡೆಸಲಿದ್ದು, ಅದರಲ್ಲಿ ಕನಿಷ್ಠ 50 ಅಂಕಗಳೊಂದಿಗೆ ಕಡ್ಡಾಯವಾಗಿ ತೇರ್ಗಡೆ ಹೊಂದಲೇಬೇಕು. ನಿಗದಿಪಡಿಸಿದ ಕನಿಷ್ಠ 50 ಅಂಕಗಳನ್ನು ಪಡೆಯದ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಾಗುವುದಿಲ್ಲ ಹಾಗೂ ಈ ಕನ್ನಡ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ.

ಆದರೆ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯ ವಿನಾಯಿತಿ ಬಗ್ಗೆ ಕೆಳಕಂಡ ಷರತ್ತುಗಳನ್ನು ಸೇರ್ಪಡಿಸಲಾಗಿರುತ್ತದೆ.

" ಎಸ್.ಎಸ್.ಎಲ್.ಸಿ. ಅಥವಾ ಇದಕ್ಕೆ ತತ್ಸಮಾನವೆಂದು ರಾಜ್ಯ ಸರ್ಕಾರದಿಂದ ಘೋಷಿಸಲ್ಪಟ್ಟ ಇತರೆ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ.ಪರೀಕ್ಷೆಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯ ಭಾಷೆಯಾಗಿ, ಅಥವಾ ದ್ವಿತೀಯ ಭಾಷೆಯಾಗಿ ಅಥವಾ ಐಚ್ಛಿಕ ವಿಷಯವಾಗಿ (ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳಲ್ಲೊಂದಾಗಿರಬಾರದು) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿರುವ ಅಥವಾ ಕರ್ನಾಟಕ ಲೋಕ ಸೇವಾ ಆಯೋಗದಿಂದ ಇದೇ ನಿಯಮಗಳಡಿಯಲ್ಲಿ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷೆ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವ ಅಭ್ಯರ್ಥಿಗಳು, ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದರಿಂದ ವಿನಾಯಿತಿ ಹೊಂದಿರುತ್ತಾರೆ ".

ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಿಂದ ವಿನಾಯಿತಿ ಪಡೆಯಲು ಅರ್ಜಿಯ ನಿಗದಿತ ಸ್ಥಳದಲ್ಲಿ ವಿವರಗಳನ್ನು ನೀಡತಕ್ಕದ್ದು. ಸರಿಯಾದ ಮಾಹಿತಿ ಒದಗಿಸದಿದ್ದಲ್ಲಿ ಮೇಲಿನ ವಿನಾಯಿತಿಗಳನ್ನು ಪಡೆಯಲು ಅರ್ಹತೆ ನೀಡುವುದಿಲ್ಲ.

**ಸೂಚನೆ:–** ಕನ್ನಡ ಕಡ್ಡಾಯ ಭಾಷಾ ಪರೀಕ್ಷೆ ಬಗ್ಗೆ ಪಠ್ಯಕ್ರಮವನ್ನು ಆಯೋಗದ ವೆಬ್ ಸೈಟ್ " http://kpsc. kar.nic.in/SYLLABUS " ನಲ್ಲಿ ಬಿತ್ತರಿಸಲಾಗಿದೆ.

ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಅರ್ಹರಾದ ನಂತರ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006ರ ಉಪನಿಯಮ 6ರನ್ವಯ ಅಭ್ಯರ್ಥಿಗಳನ್ನು ಅವರು ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡವಾರು ಮತ್ತು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಆಧಾರದ ಮೇಲೆ 1:3 ಅನುಪಾತದಲ್ಲಿ ಸಂದರ್ಶನಕ್ಕೆ ಆಹ್ವಾನಿಸಲಾಗುವುದು. ಅಭ್ಯರ್ಥಿಗಳು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

ಸಂದರ್ಶನ ನಡೆಸುವ ಉದ್ದೇಶ ಎಂದರೆ ಅಭ್ಯರ್ಥಿಗಳು ಆಯ್ಕೆ ಬಯಸಿದ ಹುದ್ದೆಗೆ ಅವರ ಅರ್ಹತೆ, ವ್ಯಕ್ತಿತ್ವ, ಸಂಬಂಧಿತ ವಿಷಯದಲ್ಲಿ ವ್ಯಕ್ತಪಡಿಸುವ ಸಾಮರ್ಥ್ಯತೆ, ಸೂಕ್ಷ್ಮತೆ ಮತ್ತು ಕರ್ತೃತ್ವ ಶಕ್ತಿ, ಸಾಮಾನ್ಯ ಜ್ಞಾನ ಹಾಗೂ ವಿಷಯದಲ್ಲಿನ ಪರಿಜ್ಞಾನ ಹಾಗೂ ಇನ್ನಿತರ ವಿಶೇಷ ಗುಣಗಳನ್ನು ನಿರ್ಧರಿಸುವುದಾಗಿದ್ದು, ಅಭ್ಯರ್ಥಿಗಳು ಆಯಾ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಗಳಿಸಿದ ಶೇಕಡವಾರು ಅಂಕಗಳ ಮತ್ತು ಆಯೋಗವು ನಡೆಸುವ ಸಂದರ್ಶನದಲ್ಲಿ ಗಳಿಸಿದ ಅಂಕಗಳ ಜೇಷ್ಠತೆಯ ಆಧಾರದ ಮೇಲೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ಆಯ್ಕೆ ಮಾಡಲಾಗುವುದು.

ಸಂದರ್ಶನಕ್ಕೆ ನಿಗದಿಪಡಿಸಲಾದ ಗರಿಷ್ಠ ಅಂಕಗಳು 15 (ಹದಿನೈದು)

**6. ಶೈಕ್ಷಣಿಕ ವಿದ್ಯಾರ್ಹತೆ, ವೇತನ ಶ್ರೇಣಿ, ವಯೋಮಿತಿ ಮತ್ತು ಹುದ್ದೆಗಳ ವರ್ಗೀಕರಣ:–**

6(ಎ) ಶೈಕ್ಷಣಿಕ ವಿದ್ಯಾರ್ಹತೆ:– ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅನುಸೂಚಿಯಲ್ಲಿ ಆಯಾ ಹುದ್ದೆಗಳ ಮುಂದೆ ಸೂಚಿಸಿರುವ ಕನಿಷ್ಠ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಲೇಬೇಕು. ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದದೆ ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿದ್ದರೂ ಸಹ ಪರಿಗಣಿಸಲಾಗುವುದಿಲ್ಲ.

ಈ ಹುದ್ದೆಗಳು ತಾಂತ್ರಿಕ ಹುದ್ದೆಗಳಾಗಿದ್ದು ಅಭ್ಯರ್ಥಿಯ ಆಯಾ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯಲ್ಲಿ ಗಳಿಸಿರುವ ಶೇಕಡವಾರು ಅಂಕಗಳ ಆಧಾರದ ಮೇಲೆ ಸಂದರ್ಶನಕ್ಕೆ ಆಹ್ವಾನಿಸುವುದರಿಂದ ಅಭ್ಯರ್ಥಿಗಳು ಅರ್ಜಿಯಲ್ಲಿ ಎಲ್ಲಾ ಸೆಮಿಸ್ಟರ್ / ವರ್ಷಗಳಲ್ಲಿ ಗಳಿಸಿರುವ ಒಟ್ಟಾರು ಅಂಕಗಳನ್ನು ಕ್ರೋಢೀಕರಿಸಿ ಗರಿಷ್ಠ ಮತ್ತು ಪಡೆದಿರುವ ಅಂಕಗಳನ್ನು ಸ್ಪಷ್ಟವಾಗಿ ನಮೂದಿಸುವುದು. ಕೆಲವು ವಿಶ್ವವಿದ್ಯಾನಿಲಯಗಳು ಮೊದಲನೆ ಬಾರಿ ಗಳಿಸಿರುವ ಅಂಕಗಳನ್ನು ಮಾತ್ರ ನಮೂದಿಸಿದ್ದು, ಒಂದಕ್ಕಿಂತ ಹೆಚ್ಚು ಬಾರಿ ಬರೆದು ಉತ್ತೀರ್ಣರಾಗಿರುವ ಅಂಕಗಳನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲ. ಅಭ್ಯರ್ಥಿಗಳು ಆ ಅಂಕಗಳನ್ನು ಸೇರಿಸಿಕೊಂಡು ಜೊತೆಗೆ ಗ್ರೇಸ್ ಮಾರ್ಕ್ಸ್‌ನ್ನು ನೀಡಿದ್ದಲ್ಲಿ ಅದನ್ನು ಒಟ್ಟು ಅಂಕಗಳೊಂದಿಗೆ ಸೇರಿಸಿಕೊಂಡು ಅಂಕಗಳನ್ನು ನಮೂದಿಸುವುದು. ಹಾಗೂ ಗ್ರೇಡ್ ಅಂಕಗಳನ್ನು ಪಡೆದ ಅಭ್ಯರ್ಥಿಗಳು ಅವರ ಗ್ರೇಡ್ ಅಂಕಗಳನ್ನು ಶೇಕಡವಾರು ಅಂಕಗಳಿಗೆ ಪರಿವರ್ತಿಸಿ ವಿಶ್ವವಿದ್ಯಾಲಯ ನೀಡಿರುವ ಪ್ರಮಾಣ ಪತ್ರದಲ್ಲಿ ನಮೂದಿಸಿರುವ ಶೇಕಡವಾರು ಅಂಕಗಳನ್ನು ತಪ್ಪದೇ ನಮೂದಿಸಬೇಕು. ಅಂಕಗಳು ವ್ಯತ್ಯಾಸ ಕಂಡುಬಂದಲ್ಲಿ ಅಭ್ಯರ್ಥಿಯೇ ಜವಾಬ್ದಾರರಾಗಿರುತ್ತಾರೆ. ತಪ್ಪಿದ್ದಲ್ಲಿ ಆಯ್ಕೆಗೆ ಪರಿಗಣಿಸಲಾಗುವುದಿಲ್ಲ.

6(ಬಿ) ಯಾವುದೇ ಹುದ್ದೆಗೆ ಸೇವಾನುಭವವನ್ನು ನಿಗದಿಪಡಿಸಿದಾಗ ಅಭ್ಯರ್ಥಿಗಳು ವಿದ್ಯಾರ್ಹತೆ ಹೊಂದಿದ ನಂತರ ಸೇವಾನುಭವ ಹೊಂದಿರತಕ್ಕದ್ದು.

6(ಸಿ) ಯಾವುದೇ ಹುದ್ದೆಗೆ ಆದ್ಯತಾ ವಿದ್ಯಾರ್ಹತೆಯನ್ನು ನಿಗದಿಪಡಿಸಿದಾಗ ಆದ್ಯತಾ ವಿದ್ಯಾರ್ಹತೆ ಹೊಂದಿರುವ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಪರಿಗಣಿಸಲಾಗುವುದು. ಆದರೆ ಆಯ್ಕೆಪಟ್ಟಿಯನ್ನು ಸಿದ್ಧಪಡಿಸುವಾಗ ಆದ್ಯತಾ ವಿದ್ಯಾರ್ಹತೆ ಹೊಂದಿರುವ ಮತ್ತು ಆದ್ಯತಾ ವಿದ್ಯಾರ್ಹತೆ ಹೊಂದದೇ ಇರುವ ಅಭ್ಯರ್ಥಿಗಳ ಅಂಕಗಳ ಜೇಷ್ಠತೆಯ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಆಧಾರದ ಮೇಲೆ ಮಾಡಲಾಗುವುದು.

**6.2 ವಯೋಮಿತಿ:–** ಅನುಸೂಚಿಯಲ್ಲಿ ಆಯಾ ಹುದ್ದೆಗಳ ಮುಂದೆ ಸೂಚಿಸಿದಂತೆ, ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ ವಯೋಮಿತಿಯನ್ನು ಹೊಂದಿರಬೇಕು ಹಾಗೂ ನಿಗದಿತ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

(ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. (ಈ ಉಪ ಕಂಡಿಕೆಗೆ ಸಂಬಂಧಿಸಿದ ವಿವರಣೆಗಳಿಗೆ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮಗಳು 2 ಮತ್ತು 9 ರನ್ವಯ ಅರ್ಥೈಸಿಕೊಳ್ಳುವುದು)

(ಇ) ಅಭ್ಯರ್ಥಿಗಳು ನ್ಯಾಷನಲ್ ಕ್ಯಾಡೆಟ್ ಕೋರ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷನಾಗಿ ಅವನು ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಈ) ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡ ಗ್ರಾಮ ಸಮೂಹ ಪರಿಶೀಲಕನಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅವನು / ಅವಳು ಅಂತಹ ಗ್ರಾಮ ಪರಿಶೀಲಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಉ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

(ಊ) ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಋ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.

(ೠ) ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು.

ಉಪ ಕಂಡಿಕೆ 6.2.(ೠ) ರ ಮೇರೆಗೆ ವಯೋಮಿತಿಯ ಸಡಿಲಿಕೆಯನ್ನು ಕೋರುವ ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದು, ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು.

